# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
–ಎ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ)
–ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ
–ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

**ಮಕ್ಕಳಿಗಾಗಿ :**

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ಎ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
–ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ
[illegible] 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1)
–ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ
–ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
–ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

**ಕೂಡಲೇ ಬರೆಯಿರಿ :**

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬರಾವು, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


**ಸಂಪುಟ ೧೮] ಜನವರಿ ೧೯೮೮ [ಸಂಚಿಕೆ ೮**


# ವಿಷಯಸೂಚಿ



ಮುಖಚಿತ್ರ: ಸಂಕ್ರಾಂತಿ ಸೂರ್ಯ ಚಿತ್ರ : ಕೆ. ಜಗದೀಶ್.

ಹಿಂಬದಿಯಲ್ಲಿ : ಸಂಕ್ರಾಂತಿ ಘೋಷ ಚಿತ್ರ : ಮೈತ್ರೀ

ಒಳಗಡೆ: 1) ತಿರುಪತಿಯಲ್ಲಿನ ಪುರಂದರೋತ್ಸವ ದೃಶ್ಯಗಳು.
2) ಉಪರಾಷ್ಟ್ರಪತಿಗಳ ತಿರುಪತಿಯ ಸಂದರ್ಶನ ಚಿತ್ರಗಳು.

# ಸಂಪಾದಕೀಯ

ಕಾಲ ಭಗವಂತನ ಸ್ವರೂಪ, ಕಾಲ ಅನಂತ, ಆದಿ ಮಧ್ಯಾಂತರಹಿತವೂ ಹೌದು. ಈ ಅನಂತಕಾಲ ಗಣನೆಯಲ್ಲಿ ಮಾನವನ ಆಯುಃಪ್ರಮಾಣ ಸ್ವಲ್ಪಾತಿಸ್ವಲ್ಪ ಮಾತ್ರ. ಆದರೆ ಈ ಅನಂತಾನಂತ ಕಾಲಚಕ್ರದಲ್ಲಿ ತನ್ನ ಇರುವಿಕೆಯನ್ನು ಗುರುತಿಸಿಕೊಳ್ಳಲು ತನಗೆ ಅನುಕೂಲವಾದ ಕಾಲ ಗಣನೆಯನ್ನು ಏರ್ಪಡಿಸಿಕೊಂಡ ಮಾನವ, ವಿವಿಧ ಪ್ರದೇಶಗಳಲ್ಲಿನ ಜನ ತಮ್ಮ ಅನುಕೂಲಗಳಿಗೆ ತಕ್ಕಂತೆ ಸೌರಮಾನ, ಚಾಂದ್ರಮಾನ, ಬಾರ್ಹಸ್ಪತ್ಯಮಾನ...ಹೀಗೆ ಕಾಲ ಗಣನೆಯ ಮಾನಗಳನ್ನು ಏರ್ಪಡಿಸಿಕೊಂಡರು. ಹನ್ನೆರಡು ರಾಶಿಗಳಲ್ಲಿ ಗ್ರಹಾಧಿಪತಿಯಾದ ಸೂರ್ಯನ ಸಂಚಾರಾನುಗುಣವಾದ ಕಾಲಮಾನ ಸೌರಮಾನವಾದರೆ, ಅಶ್ವಿನಿ, ಭರಣಿ, ಮೊದಲಾದ ನಕ್ಷತ್ರ ಗಣದಲ್ಲಿ ಚಂದ್ರಸಂಚಾರಾನುಗುಣವಾಗಿ ಏರ್ಪಟ್ಟದ್ದು ಚಾಂದ್ರಮಾನವಾಯಿತು. ಗುರು ಗ್ರಹದ ಸಂಚಾರಾನುಗುಣವಾಗಿ ಬಾರ್ಹಸ್ಪತ್ಯಮಾನ... ಹೀಗೆ ಅನಂತಕಾಲವನ್ನು ಆಯಾ ಕಾಲಮಾನದಲ್ಲಿ ಒಂದು ವರುಷ ಪರಿಮಿತಿಯಲ್ಲಿ ಅಳೆಯುವುದು ಅಭ್ಯಾಸವಾಯಿತು. ಸಂವತ್ಸರವಾಗಿ ಮತ್ತೆ ಸಂವತ್ಸರ ಆರಂಭವಾಗುವ ಹೊತ್ತು ವರ್ಷದ ಆದಿಯೆಂದು ಹಬ್ಬ ಮಾಡಿಕೊಳ್ಳುವುದು, ಆ ವರ್ಷವೆಲ್ಲ ತಮ್ಮ ಜೀವನ ಸುಖಕರವಾಗಿ ನಡೆಯಲೆಂದು ಪ್ರಶಾಂತವಾಗಿ ಸಾಗಲೆಂದೂ, ಆಶಿಸುತ್ತ, ಅಂದು ಅವರವರಿಗಿಷ್ಟವಾದ ದೇವಾಲಯಗಳನ್ನು ಸಂದರ್ಶಿಸುವುದೂ, ದೇವರನ್ನು ವಿಶೇಷವಾಗಿ ಪೂಜಿಸುವುದೂ ಪರಂಪರೆಯಾಗಿ, ಅದು ಸತ್ಸಂಪ್ರದಾಯವೆಂದು ಹೆಸರಾಯಿತು.

ಹಾಗೆಯೇ ಸೌರಮಾನಕ್ಕೆ ಹತ್ತಿರವಾಗಿ, ಪ್ರಸ್ತುತ ಪ್ರಚಾರದಲ್ಲಿರುವ ಆಂಗ್ಲ ಸಂವತ್ಸರದಾದಿ ಎಂದರೆ ಜನವರಿ 1 ರಂದು ತಿರುಮಲೆಗೆ ಬಂದು ಸ್ವಾಮಿಯನ್ನು ದರ್ಶಿಸಿ ಆರಾಧಿಸುವವರ ಸಂಖ್ಯೆ ವರ್ಷೇವರ್ಷೇ ಏರುತ್ತ ಹೋಗುತ್ತಿದೆ. ಸರ್ವ ಮತಪಂಥ ಜಾತಿಗಳನ್ನೂ ಮೀರಿ ಎಲ್ಲರಿಂದಲೂ ಪೂಜೆಗೊಂಬ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ದರ್ಶಿಸಿದ ದಿನವೇ ವರ್ಷದ ಆದಿಯೆಂದು ತಿಳಿದವರೂ ಹೆಚ್ಚಾಗಿದ್ದರೂ, ಜನವರಿ 1 ರಂದು ವಿಪರೀತ ಸಂದಣಿ ಇದ್ದೇ ಇರುತ್ತದೆ

ಸೂರ್ಯೇಂದ್ವಾಸ್ಫುರ ಬುಧಾರ್ಯ ಕಾವ್ಯ ಶನಿ ರಾಹುಕ್ವಾಪ್ತನಾಮಗ್ರಹಾನ್
ಜ್ಯೋತಿಶ್ಚಕ್ರ ವಿಭಾಸಿತಾನ್ ಜನಿಮತಾನ್ ಕರ್ಮಪ್ರಕಾಶೇ ಸಿತಾನ್
ಶೇಷಾದ್ರಿಪ್ರಭು ದೇವದೇವ ದಯಯಾ ಲಬ್ಧಾಧಿಕಾರಾನ್ ಸದಾ
ತಸ್ಮಾಸು ಗ್ರಹಕಾಂಕ್ಷಿಣಃ ಸುರವರಾನ್ ನಿತ್ಯಂ. ನಮಸ್ಕುರಹೇ

ಶ್ರೀ ಶೇಷಾಚಲಕ್ಕೆ ಪ್ರಭುವಾದ ಶ್ರೀ ವೆಂಕಟೇಶ ಪರಬ್ರಹ್ಮನ ದಯೆಯಿಂದ ಅಧಿಕಾರ ಹೊಂದಿದವರಾಗಿ, ಜ್ಯೋತಿಶ್ಚಕ್ರದಲ್ಲಿ ಪ್ರಕಾಶಿಸುತ್ತ, ಜನ್ಮಬದ್ಧರಾದವರ ಕರ್ಮಬಂಧಗಳನ್ನು ಪ್ರಕಾಶಪಡಿಸುತ್ತ, ದೇವದೇವನಾದ ಶ್ರೀ ವೆಂಕಟಾಚಲಪತಿಯ ಅನುಗ್ರಹವನ್ನು ಸದಾ ಹಾರೈಸುತ್ತ, ದೇವಶ್ರೇಷ್ಠರಾದ ಸೂರ್ಯಚಂದ್ರ ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಕೇತುಗಳೆಂಬ ನವಗ್ರಹಗಳಿಗೆ ದಿನವೂ ನಮಸ್ಕಾರ ಮಾಡುತ್ತೇನೆ.

ತಿರುಮಲೆಗೆ ಆಗಮಿಸುವ ಭಕ್ತಕೋಟಿಗೆ ಶ್ರೀನಿವಾಸನ ಅನುಗ್ರಹ ಸಂಪೂರ್ಣವಾಗಿ ದೊರೆಯಲೆಂದು ಪ್ರಾರ್ಥಿಸುತ್ತೇನೆ.

"ದಾಸರೆಂದರೆ ಪುರಂದರದಾಸರಯ್ಯಾ" ಎಂಬುದಾಗಿ ಗುರುಗಳಾದ ಶ್ರೀ ವ್ಯಾಸರಾಯರಿಂದ ಹೊಗಳಿಕೆಯನ್ನು ಪಡೆದ ಕೀರ್ತಿ ಹರಿದಾಸ ಶ್ರೇಷ್ಠರಾದ ಶ್ರೀ ಪುರಂದರ ದಾಸರದು. ಮಧ್ವಮತದ ಅನೇಕ ತತ್ತ್ವಗಳನ್ನು ಯುಕ್ತಿ ಯುಕ್ತವಾಗಿ ತಿಳಿಸಿಕೊಟ್ಟಿರುವುದು ಪುರಂದರದಾಸರ ವೈಶಿಷ್ಟ್ಯವೇ ಸರಿ. ಕನ್ನಡ ದಾಸ ಸಾಹಿತ್ಯಕ್ಕೆ ಅವರ ಕೊಡುಗೆ ಅಪಾರ. ಅವರ ಕೃತಿಗಳು 'ತತ್ತ್ವರತ್ನಾಕರ'ಗಳೆಂದು ಹೆಸರು ಪಡೆದಿವೆ. ಅವರ ಕೃತಿಗಳಲ್ಲೊಂದಾದ 'ಎನಗೊಬ್ಬ ದೊರೆಯು ದೊರೆತಿಹನು' ಎಂಬ ಪದ್ಯದಲ್ಲಿ ಬರುವ ಶ್ರೀ ವಿಷ್ಣು ಸರ್ವೋತ್ತಮತ್ವವೇ ಮೊದಲಾದ ದ್ವೈತಸಿದ್ಧಾಂತದ ತತ್ತ್ವಗಳ ವಿವೇಚನೆ ಇಲ್ಲಿ ಮಾಡಲಾಗಿದೆ.

'ಎನಗೊಬ್ಬ ದೊರೆಯು ದೊರಕಿದನು' ಇಲ್ಲಿ 'ಏಕಮೇವಾದ್ವಿತೀಯಮ್' ಎಂಬ ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಹಾಗೂ 'ಏಕಃಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ' ಎಂಬ ಶ್ರೀಮನ್‌ಮಹಾಭಾರತದ ಶ್ಲೋಕ ಭಾಗದಲ್ಲಿ ಬರುವ ಸಾರವನ್ನು ಸಂಗ್ರಹಿಸಿದ್ದಾರೆ.

ಈ ಪ್ರಪಂಚದಲ್ಲಿ ಪರಮಾತ್ಮನು ಒಬ್ಬನೇ. ಅವನು ಸಮಾಧಿಕ-ರಹಿತನು. ಅವನೇ ಎಲ್ಲರಿಗೂ ಪ್ರಭು (ದೊರೆ) ವಾಗಿದ್ದಾನೆ. ಎರಡನೆಯವನಿಲ್ಲ ಎನ್ನುತ್ತಾರೆ ದಾಸರು. "ಏಕಃ ಪರಮ ಆಸೀತ್" ಎಂಬ ನಾರಾಯಣ ಶ್ರುತಿಯನ್ನು ಹಾಗೂ "ನಾರಾಯಣಃ ಪರತಮಃ ಪರಮಾತ್ಮ ಏಕಃ" ಎಂಬ ಶ್ರೀಮನ್‌ಮಹಾಭಾರತ ತಾತ್ಪರ್ಯ ನಿರ್ಣಯಗಳ ಸಾರವನ್ನು ಇಲ್ಲಿ ನೆನೆದುಕೊಳ್ಳಬಹುದು.

"ವನಜಸಂಭವಜನಕ – ಹನುಮನಂತರ್ಯಾಮಿ"– ಇಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡುವವನು ಪರಮಾತ್ಮನೇ ಆಗಿದ್ದಾನೆ – ಎಂಬುದಾಗಿ ತಿಳಿಸಿದ್ದಾರೆ. ಭಗವದ್ಗೀತೆಯಲ್ಲಿ "ಬ್ರಹ್ಮಣೋ ಪ್ಯಾದಿಕರ್ತ್ರೇ" ಎಂಬ ಶ್ಲೋಕಭಾಗದಲ್ಲಿ ಬರುವ ಅರ್ಥವನ್ನೇ ದಾಸರು "ವನಜ ಸಂಭವಜನಕ" ಎಂದಾಗಿ ತಿಳಿಸಿರುವರು. ಇನ್ನು "ಹನುಮನಂತರ್ಯಾಮಿ" ಶ್ರೀಹರಿಯಾಗಿದ್ದಾನೆ–ಕಾರಣವೆಂದರೆ–

ದೇಹೇಽಪಿ ಯತ್ರ ಪವನೋಽತ್ರ
ಹರಿರ್ಯತೋಽಸೌ ।
ತತ್ರೈವ ವಾಯುರಿತಿ
ವೇದವಚಃ ಪ್ರಸಿದ್ಧಂ ॥

ಎಂಬಂತೆ ವಾಯುದೇವರ ಅಂತರ್ಯಾಮಿಯಾಗಿ ಶ್ರೀಹರಿಯು ಸರ್ವದಾ ನೆಲೆಸಿದ್ದಾನೆ.



# ಪುರಂದರದಾಸರ ಒಂದು ಪದ

ಎನಗೊಬ್ಬ ದೊರೆಯು ದೊರಕಿದನು
ವನಜ ಸಂಭವಜನಕ ಹನುಮಂತರ್ಯಾಮಿ ॥ಪ॥

ಮಾತಾಪಿತನಾದ ಭ್ರಾತೃಬಾಂಧವನಾದ
ಪ್ರೀತಿಯಿಂದಲಿ ತಾನೇ ನಾಥನಾದ
ಖ್ಯಾತನು ತಾನಾದ ದಾತನು ತಾನಾದ
ಭೂತೇಶ ವಂದ್ಯ ವಿಭೂತಿ ಪ್ರಿಯನಾದ -೧-

ಅಜರಾಮರಣನಾದ ಅಪ್ರಾಕೃತನಾದ
ವಿಜಯನೊಲಿದ ನಿಜಸೂತನಾದ
ಭುಜಗಶಯನನಾದ ತ್ರಿಜಗವಂದಿತನಾದ
ಅಜಮಿಳನ ಅಂತ್ಯತ್ಯಂತ ಸುಹೃದನಾದ -೨-

ಶಂಖ ಚಕ್ರಾಂಕಿತದ ಸಂಕರುಷಣನಾದ
ಬಿಂಕದಿಂ ಬಿರುದುಗಳ ಪೊತ್ತವನಾದ
ಪಂಕಜನಯನ ಮೀನಾಂಕ ಜನಕನಾದ
ಓಂಕಾರದ ಮೂರುತಿ ಪುರಂದರ ವಿಠಲನಾದ -೩-

ಪುರಂದರದಾಸರು.

ಈ ವಾಯುದೇವರೇ ಹನುಮ, ಭೀಮ, ಮಧ್ವರೆಂಬ ಮೂರು ರೂಪಗಳಿಂದ ಪರಮಾತ್ಮನ ಸೇವೆ ಮಾಡಿ ಪ್ರೀತಿಗೆ ಪಾತ್ರರಾದರು. ನಾವು ನಮ್ಮ ಸರ್ವ ಕರ್ಮಗಳನ್ನು ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಹರಿಗೆ ಅರ್ಪಿಸುವುದು ಅತ್ಯವಶ್ಯವಾಗಿದೆ. "ತಸ್ಮಿನ್ನಪೋ ಮಾತರಿಶ್ವಾ ದಧಾತಿ" ಎಂಬ ಈಶೋಪನಿಷತ್ತಿನ ವಾಕ್ಯದಂತೆ – ಮುಖ್ಯ ಪ್ರಾಣರೇ ಈ ಕೆಲಸವನ್ನು ಸರಿಯಾಗಿ ನಿರ್ವಹಿಸಿ ಶ್ರೀಹರಿಗೆ ಮುಟ್ಟಿಸುವವರು. ಅವರ ಅಧಿಷ್ಠಾನದಲ್ಲಿ ಸಮರ್ಪಿಸಿದರೆ ಮಾತ್ರ ದೇವರಿಗೆ ಮುಟ್ಟುವುದು ನಿಶ್ಚಿತ. ಕಾರಣ– ಅವತಾರತ್ರಯ ವಿಶಿಷ್ಟರಾದ ವಾಯುದೇವರಲ್ಲಿ ಪರಮಾತ್ಮನು ಸರ್ವದಾ-ನೆಲೆಸಿರುತ್ತಾನೆಂದು ತಿಳಿಸಿಕೊಟ್ಟಿದ್ದಾರೆ ಶ್ರೀ ದಾಸರಾಯರು.

ಮಾತಾಪಿತನಾದ ಭ್ರಾತೃಬಾಂಧವನಾದ
ಪ್ರೀತಿಯಿಂದಲಿ ತಾನೇ ನಾಥನಾದ

ಇಲ್ಲಿ ಭಗವದ್ಗೀತೆಯಲ್ಲಿ ಬರುವ ಕೆಳಗಿನ ಶ್ಲೋಕದ ಭಾವವು ಅಡಗಿದೆ–

ಪಿತಾಹಮಸ್ಯ ಜಗತೋ
ಮಾತಾಧಾತಾ ಪಿತಾಮಹಃ ।
ಗತಿರ್ಭರ್ತಾ ಪ್ರಭುಃ ಸಾಕ್ಷೀ
ನಿವಾಸಃ ಶರಣಂ ಸುಹೃತ್ (9-17)

ಎಂಬಂತೆ– ಪರಮಾತ್ಮನೇ ಈ ಸಮಸ್ತ ಜಗತ್ತಿಗೆ ತಂದೆಯು ತಾಯಿಯು ಪೋಷಕನು ಆಗಿದ್ದಾನೆ. ಸಜ್ಜನರಿಗೆ ಗತಿಪ್ರದನೂ ಸ್ವಾಮಿಯೂ ಆಗಿರುವನು – ಮತ್ತು ಸರ್ವಾಶ್ರಯನೂ ಸರ್ವಾಧಾರನೂ ಆಗಿದ್ದಾನೆ. ಇಲ್ಲಿ ಸುಹೃತ್ ಎಂಬುದಕ್ಕೆ– ಅನಿಮಿತ್ತೋಪಕಾರಿಯೂ ಹಾಗೂ ಪ್ರಭುಃ ಎಂಬುದಕ್ಕೆ ನಾಥ ಅಂದರೆ ಸ್ವಾಮಿ (ದೊರೆ) ಎಂಬುದು ಚೆನ್ನಾಗಿ ಮೂಡಿಬಂದಿದೆ. ಪಂಚರಾತ್ರಾಗಮದ ಅಷ್ಟಾಕ್ಷರ ಕಲ್ಪದಲ್ಲಿ ಜಿತಂತೇ ಸ್ತೋತ್ರದಲ್ಲಿ ಬರುವ–

ಪಿತಾಮಾತಾ ಸುಹೃತ್ ಬಂಧುಃ
ಭ್ರಾತಾ ಪುತ್ರಸ್ತ್ವಮೇವ ಮೇ ।

ಮತ್ತು

ತ್ವಂ ಚ ಸ್ವಾಮೀ ಗುರುರ್ಮಾತಾ
ಪಿತಾ ಚ ಮಮ ಬಾಂಧವಃ ॥

ಎಂಬುದನ್ನೂ ಕೂಡ– ಇಲ್ಲಿ ಸ್ಮರಿಸಿಕೊಳ್ಳಬಹುದು.

ಖ್ಯಾತನು ತಾನಾದ ದಾತನು ತಾನಾದ ।
ಭೂತೇಶ ವಂದ್ಯ ವಿಭೂತಿ ಪ್ರಿಯನಾದ ॥

ಪರಮಾತ್ಮನು ಸರ್ವೋತ್ತಮನು, ಪುರುಷೋತ್ತಮನು ಮತ್ತು ಮುಕ್ತಿಯನ್ನು ದಯಪಾಲಿಸುವವನು ಎಂಬುದಾಗಿ ಖ್ಯಾತನಾಗಿದ್ದಾನೆ–

ಯಸ್ಮಾತ್ ಕ್ಷರಮತೀತೋಽಹಂ
ಅಕ್ಷರಾದಪಿಚೋತ್ತಮಃ ।
ಅತೋಽಸ್ಮಿಲೋಕೇ ವೇದೇ ಚ
ಪ್ರಥಿತಃ ಪುರುಷೋತ್ತಮಃ ॥
(ಗೀತಾ– 15-18)

ಹಾಗೂ

ಅಜ್ಞಾನಾಂ ಜ್ಞಾನದೋ ವಿಷ್ಣುಃ
ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಂ
ಸಏವೈಕೋ ಜನಾರ್ದನಃ ॥
(ವಿಷ್ಣುತತ್ತ್ವವಿನಿರ್ಣಯ)

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯಲ್ಲದ ಸ್ಥಳೀಯ ದೇವಾಲಯ ಆಡಳಿತಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

ಈ ಶ್ಲೋಕಗಳಿಂದ ಪರಮಾತ್ಮನು ಕ್ಷರಾಕ್ಷರ ಪುರುಷರಿಗಿಂತ ಉತ್ತಮನೆಂದು, ಪುರುಷೋತ್ತಮನೆಂದೂ, ಅಜ್ಞಾನಿಗಳಿಗೆ ಜ್ಞಾನವನ್ನು, ಜ್ಞಾನಿಗಳಿಗೆ ಮುಕ್ತಿಯನ್ನು, ಮುಕ್ತರಿಗೆ ಆನಂದವನ್ನು ಕೊಡುವನು ಎಂಬುದು ತಿಳಿದುಬರುತ್ತದೆ. "ಸ ಏವೈಕೋ ಜನಾರ್ದನಃ" ಎಂಬ ಪದದಿಂದ ಇಂಥ ದೊರೆಯೇ ಶ್ರೀ ಹರಿಯು, ನಮಗೆ ದೊರಕಿದನು ಎಂಬ ದಾಸರ ವಾಣಿಯು ಹರ್ಷವನ್ನು ತರುತ್ತದೆ.

ಇನ್ನು ಭೂತೇಶ ಅಂದರೆ ರುದ್ರದೇವರು. ಅವರಿಂದಲೂ ಪರಮಾತ್ಮನು ವಂದ್ಯನಾಗಿದ್ದಾನೆ ಹಾಗೂ ವಿಭೂತಿಪ್ರಿಯನು ಆಗಿದ್ದಾನೆ.

ಭೂತೇಶಃ ಖಂಡಪರಶುಃ
ಗಿರೀಶೋ ಗಿರಿಶೋಮೃಡಃ ।
(ಅಮರಕೋಶ)

ಭೂತಾಃ ಅಂದರೆ ಪ್ರಾಣಿನಃ – ತೇಷಾಂ ಅಧಿಪಃ ಭೂತೇಶಃ – ರುದ್ರದೇವರು – ಅವರಿಂದ ವಂದ್ಯನಾದವನು ಶ್ರೀಹರಿಯು. "ಉಜ್ಯತೇ ಸರ್ವ ವೇದೋರುವಾದ್ಯೈರಜಃ। ಸ್ವರ್ಚಿತೋ ಬ್ರಹ್ಮರುದ್ರೇಂದ್ರ ಪೂರ್ವೈಃ ಸದಾ" ಎಂಬುದಾಗಿ ಶ್ರೀ ಮದಾಚಾರ್ಯರು ದ್ವಾದಶ ಸ್ತೋತ್ರದಲ್ಲಿ ವರ್ಣಸಿರುವುದು ಇಲ್ಲಿ ಗಮನಾರ್ಹವಾಗಿದೆ. ವಿಭೂತಿ ಎಂದರೆ ವಿಶೇಷ ರೂಪಧಾರಣೆ. ಶ್ರೇಷ್ಠತ್ವ ಮತ್ತು ವಿವಿಧ ಅಧಿಷ್ಠಾನಗಳಲ್ಲಿ ಇರುವಿಕೆ ಎಂದು ಅರ್ಥವಾಗುತ್ತದೆ. ಈ ವಿಭೂತಿ ರೂಪಗಳ ವಿವರಣೆಯನ್ನು ಶ್ರೀ ಮದ್-ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಸಂಪೂರ್ಣವಾಗಿ ಕೊಡಲಾಗಿದೆ. ಶ್ರೀ ಮದಾಚಾರ್ಯರು ತಮ್ಮ ಗೀತಾ ತಾತ್ಪರ್ಯದಲ್ಲಿ "ವಿಭೂತಿತತ್ತ್ವ" ಎಂಬ ಗ್ರಂಥದ ಆಧಾರಕೊಟ್ಟು ಈ ವಿಷಯ ತಿಳಿಸಿ ಕೊಟ್ಟಿದ್ದಾರೆ–

ಯದ್ಯದ್ವಿಭೂತಿ ಮತ್ಸತ್ತ್ವಂ
ಶ್ರೀಮದೂರ್ಜಿತಮೇವ ವಾ ।
ತತ್ತದೇವಾವ ಗಚ್ಛತ್ವಂ
ಮಮ ತೇಜೋಂಶ ಸಂಭವಮ್ ॥

ಎಂಬಂತೆ ಪರಮಾತ್ಮನ ವಿಶಿಷ್ಟ ಸನ್ನಿಧಾನದಿಂದ ಯುಕ್ತವಾದ ವಸ್ತುವು ಆಯಾ ಸಮಾನ ಜಾತೀಯ ವಸ್ತುಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿ ವಿಭೂತಿರೂಪವೆನಿಸಿಕೊಳ್ಳುತ್ತದೆ. ಇಂಥ ಯಾವ ರೂಪಗಳು ಪರಮಾತ್ಮನಿಗೆ ಪ್ರಿಯವಾದವು ಎಂಬುದಾಗಿ ದಾಸರು ಹೇಳುತ್ತಾರೆ–

ಅಜರಾಮರಣನಾದ ಅಪ್ರಾಕೃತನಾದ ।
ವಿಜಯನೊಲಿದು ನಿಜಸೂತನಾದ ।

ಇಲ್ಲಿ ಪರಮಾತ್ಮನು ಜರಾ (ಮುಪ್ಪು) ಮರಣ (ಸಾವು) ಗಳಿಲ್ಲದವನು ಮತ್ತು ಅಪ್ರಾಕೃತ- ಅಂದರೆ ಪ್ರಾಕೃತದೇಹವಿಲ್ಲದವನು (ಜ್ಞಾನಾನಂದಾದಿ ದೇಹವುಳ್ಳವನು) ಎಂದಾಗಿ ಹೇಳುತ್ತಾರೆ.

ಶ್ರೀ ಮದಾಚಾರ್ಯರು ಪರಮಾತ್ಮನನ್ನು "ಅಜರಾಮರಣಃ ಸಕಲಾರ್ತಿಹರಃ" ಎಂಬಂತೆ ದ್ವಾದಶ ಸ್ತೋತ್ರದಲ್ಲಿ ಬಣ್ಣಿಸಿರುವುದನ್ನು ಹಾಗೂ ಜಿತಂತೇ ಸ್ತೋತ್ರದಲ್ಲಿ ಬರುವ "ಅಪ್ರಾಕೃತಸುರೈರ್ವಂದ್ಯಂ ಅಯುತಾರ್ಕಸಮಪ್ರಭಮ್" ಎಂಬ ಶ್ಲೋಕವನ್ನು ಇಲ್ಲಿ ಸ್ಮರಿಸಬಹುದು.

ಶ್ರೀಹರಿಯು ವಿಜಯ ಅಂದರೆ ಅರ್ಜುನನಿಗೆ ಒಲಿದು ಸಾರಥಿತ್ವವನ್ನು ವಹಿಸಿದ ವಿಷಯವನ್ನು ವಿವರಿಸುತ್ತಾರೆ– ಅರ್ಜುನಃ ಫಲ್ಗುನಃ ಪಾರ್ಥಃ ಕಿರೀಟೀ ಶ್ವೇತವಾಹನಃ। ಬೀಭತ್ಸುಃ ವಿಜಯೋ ಜಿಷ್ಣುಃ ಸವ್ಯಸಾಚೀ ಧನಂಜಯಃ। ಎಂಬಂತೆ– ಅರ್ಜುನನಿಗೆ ವಿಜಯನೆಂದು ಹೆಸರು. ಸೂತ ಎಂದರೆ ಸಾರಥಿ. "ಕುರುಕ್ಷೇತ್ರ ರಣರಂಗದಲ್ಲಿ ಅರ್ಜುನನು ಶ್ರೀಕೃಷ್ಣನಿಗೆ "ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ" ಎಂದಾಗಿ ಹೇಳಿರುವುದು ಇಲ್ಲಿ ಗಮನಾರ್ಹವಾಗಿದೆ.

ಭುಜಗಶಯನನಾದ ತ್ರಿಜಗವಂದಿತನಾದ ।
ಅಜಮಿಳನ ಅಂತ್ಯತ್ಯಂತ ಸುಹೃತನಾದ ।

ಭುಜಗ ಅಂದರೆ ಸರ್ಪ. ಪರಮಾತ್ಮನು ಶೇಷಶಾಯಿಯಾಗಿದ್ದಾನೆ ಮತ್ತು ಮೂರು ಲೋಕಗಳಿಂದ ವಂದಿತನಾಗಿದ್ದಾನೆ.



## ಶ್ರೀ ಪುರಂದರದಾಸರು

ನಮ್ಮ ನಾಡಿನ ಪುಣ್ಯ ಬೀಡಲಿ
ದಾಸ ಪುರಂದರ ಜನಿಸಿದ ।
ಸಕಲ ಸಿರಿಯನು ತ್ಯಾಗ ಮಾಡುತ
ದೇವ ಕೀರ್ತನೆ ಪಾಡಿದ ॥ ೧

ಶ್ರೀ ಪುರಂದರ ಅಂಕಿತ ಇರಿಸಿ
ಅಗಣಿತ ಕೀರ್ತನೆ ರಚಿಸಿದ ।
ಊರು ಕೇರಿಯ ಬಿಡದಲೆ ಸುತ್ತಿ
ಹರಿಯ ನಾಮವ ಬಿತ್ತಿದ ॥ ೨

ಪಿಸುಣ ತನದಲಿ ಮೆರೆದನು ಆ
ಹರಿಯ ದೊರೆತನ ಸಾರಿದ ।
ವ್ಯಾಸರಾಯರ ಕರುಣೆ ಪಡೆದು
ದಾಸ ಶ್ರೇಷ್ಠನು ಎನಿಸಿದ ॥ ೩

ಹಂಪೆ ದೇವನ ದಿವ್ಯ ಸನ್ನಿಧಿ
ಸ್ವರ್ಗವೆ ತಾನು ಆಯಿತು ।
ಶ್ರೀ ಪುರಂದರ ಭಕುತಿ ಗೀತಕೆ
ಮನವೆ ಸ್ವರ್ಗವು ಆಯಿತು ॥ ೪

—ಕವಿತಾಕೃಷ್ಣ

ಶೇಷಸ್ತಯೋರೇವ ಹಿ ಜೀವನಾಮಾ ।
ಕಾಲಾತ್ಮಕಃ ಸೋऽಥ ಸುಪರ್ಣ
ಆಸೀತ್ ।
ತೌ ವಾಹನಂ ಶಯನಂ ಚೈವ ವಿಷ್ಣೋಃ।
ಕಾಲಾಜಯಾದ್ಯಾಶ್ಚ ತತಃ ಪ್ರಸೂತಾಃ ॥

ಎಂಬಂತೆ ಶ್ರೀಹರಿಯು ಶೇಷಶಾಯಿಯಾಗಿದ್ದಾನೆ.

ಅಜಾಮಿಳನು ಮಹಾಭಗವದ್ಭಕ್ತನಾಗಿದ್ದ. ಅನೇಕ ಪಾಪಕೃತ್ಯಗಳನ್ನೆಸಗಿದರೂ ಅಂತ್ಯಕಾಲದಲ್ಲಿ ಅನುಸಂಧಾನ ಪೂರ್ವಕ – ಪರಮಾತ್ಮನ ಸ್ಮರಣೆಯಿಂದ "ನಾರಾಯಣ'' ನಾಮವುಳ್ಳ ಮಗನನ್ನು ಕರೆದ. ಇದರಿಂದ ಅವನು ವೈಕುಂಠವನ್ನೇ ಕುರಿತು ನಡೆದ. ಶ್ರೀಹರಿಯು ಅವನ ಮೇಲೆ ಕೃಪೆ ದೋರಿದ. ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಪರಮಾತ್ಮನನ್ನು "ಸುಹೃತ್'' ಎಂದಾಗಿ ಕರೆದಿರುವುದು ಇಲ್ಲಿ ಮನನೀಯವಾಗಿದೆ.

ಶಂಖ ಚಕ್ರಾಂಕಿತದ ಸಂಕರುಷಣ
ನಾದ ।
ಬಿಂಕದಿಂ ಬಿರುದುಗಳ ಪೊತ್ತವನಾದ ॥

ಪರಮಾತ್ಮನು ಶಂಖ ಚಕ್ರಾದಿಗಳನ್ನು ಧರಿಸಿದ್ದಾನೆ ಮತ್ತು ಪ್ರಳಯಕಾಲದಲ್ಲಿ ಎಲ್ಲ ಜಗತ್ತನ್ನು ಕರ್ಷಣಮಾಡಿ ತನ್ನ ಉದರದಲ್ಲಿ ಇಟ್ಟುಕೊಳ್ಳುವ ಕಾರಣದಿಂದ "ಸಂಕರ್ಷಣ'' ಎನಿಸಿದ್ದಾನೆ.

ಜಿತಂತೇ ಸ್ತೋತ್ರದಲ್ಲಿ ಶ್ರೀಹರಿಯನ್ನು "ಶಂಖಚಕ್ರಗದಾಪದ್ಮೈಃ ಅಂಕಿತಂ ಪಾದಪಂಕಜಂ'' ಎಂಬುದಾಗಿ ಬ್ರಹ್ಮದೇವರೇ ಸ್ತೋತ್ರಮಾಡಿದ್ದಾರೆ. ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಪರಮಾತ್ಮನನ್ನು "ದೃಢಃ ಸಂಕರ್ಷಣೋऽಚ್ಯುತಃ" ಎಂದು ಸ್ತುತಿಸಿರುವದನ್ನು ಹಾಗೂ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀ ಮಧ್ವಾಚಾರ್ಯರು–"ಸಂಕರ್ಷಣಃ ಸಚ ಬಭೂವ ಪುನಃ ಸಂನಿತ್ಯಾ'' ಎಂಬುದಾಗಿ ಸ್ತುತಿಸಿರುವದನ್ನು ನೆನಪಿಸಿಕೊಳ್ಳಬಹುದು. ಪರಮಾತ್ಮನು ತನ್ನ ಭಕ್ತರನ್ನು ಸರ್ವದಾ ರಕ್ಷಿಸುತ್ತ "ಅಕ್ರೂರವರದ, ಅಂಬರೀಷವರದ, ಪ್ರಹ್ಲಾದವರದ, ಧ್ರುವವರದ, ಗಜೇಂದ್ರವರದ'' ಇತ್ಯಾದಿ ಬಿರುದುಗಳನ್ನೂ ಧರಿಸಿರುವದು ಸರ್ವವಿದಿತ ವಿಷಯವಾಗಿದೆ. ಮತ್ತು "ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ'' ಶ್ಲೋಕದಲ್ಲಿ ಪ್ರಭುವಾದ ಶ್ರೀಹರಿಯು ಅನೇಕ ಬಿರುದುಳ್ಳವನಾಗಿದ್ದಾನೆಂದು ತಿಳಿದುಬರುತ್ತದೆ.

ಪಂಕಜನಯನ ಮೀನಾಂಕಜನಕನಾದ।
ಓಂಕಾರಮೂರುತಿ ಪುರಂದರ
ವಿಠಲನಾದ

ಪರಮಾತ್ಮನು ಕಮಲನೇತ್ರನು ಹಾಗೂ ಮನ್ಮಥ (ಕಾಮ) ನನ್ನು ಪಡೆದವನಾಗಿದ್ದಾನೆ.

"ಪದ್ಮನಾಭೋ ಅರವಿಂದಾಕ್ಷ" ಎಂಬ ವಿಷ್ಣುಸಹಸ್ರನಾಮದಿಂದ ಪರಮಾತ್ಮನು ಪಂಕಜನಯನನಾಗಿದ್ದಾನೆಂದು ತಿಳಿದುಬರುತ್ತದೆ. ಮತ್ತು ಕಾಮನೇ ಮುಂದೆ ಪ್ರದ್ಯುಮ್ನನಾಗಿ ರುಕ್ಮಿಣೀದೇವಿಯಲ್ಲಿ ಜನ್ಮ ಪಡೆದಿದ್ದಾನೆ. ಕಾರಣ ಶ್ರೀಹರಿಯು 'ಮೀನಾಂಕ' ಜನಕನಾಗಿದ್ದಾನೆಂಬುದು ತುಂಬಾ ಸರಿಯೇ. ಇನ್ನು ಓಂಕಾರವು ಪರಮಾತ್ಮನ ಸ್ವರೂಪವಾಗಿದೆ.

ಅಕಾರೇಣ ಜಗತ್ರಾತಾ
ಸಂಹರ್ತಾಸ್ಯಾದುಕಾರತಃ ।
ಮಕಾರೇಣ ಜಗತ್‌ಸ್ರಷ್ಟಾ–
ಪ್ರಣವಾರ್ಥ ಉದಾಹೃತಃ ॥

ಓಂಕಾರವು ಅ, ಉ, ಮಕಾರಗಳಿಂದ ಕೂಡಿದೆ. ಓಂಕಾರವು ಮೋಕ್ಷಪ್ರದವಾದುದು. ಪರಮಾತ್ಮನು ಗುಣಪೂರ್ಣನಾದುದರಿಂದ ಅವನಿಗೆ 'ಓಂ' ಎಂದು ಹೆಸರು ಬಂದಿದೆ.

ಇಂಥ ಓಂಕಾರ ಪ್ರತಿಪಾದ್ಯನಾದ ಪುರಂದರ ವಿಠಲನು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕಾರಣನೆನಿಸಿ ಅದ್ವಿತೀಯನೆನಿಸಿದ್ದಾನೆ. ಈ ಪರಮಾತ್ಮನು ಸರ್ವರಿಗೂ ಪ್ರಭು (ದೊರೆ) ಯಾಗಿದ್ದಾನೆ. ಅವನ್ನೇ ದಾಸಶ್ರೇಷ್ಠ ಪುರಂದರದಾಸರು "ಎನಗೊಬ್ಬ ದೊರೆಯು ದೊರಕಿದನು'' ಎಂಬ ಪದ್ಯದಿಂದ ಶ್ರೀಹರಿಯನ್ನು ಕೊಂಡಾಡಿ ತಿಳಿಸಿಕೊಟ್ಟಿದ್ದಾರೆ.

ಶ್ರೀ ಮಧ್ವೇಶಾರ್ಪಣಮಸ್ತು



# ಪುರಂದರದಾಸರ ಪದಗಳಲ್ಲಿ ಸಮಾಜ ನೀತಿ

ಮಾನವನು ಸಮಾಜ ಜೀವಿ. ಮನುಷ್ಯನನ್ನು ಬಿಟ್ಟು ಸಮಾಜವಿಲ್ಲ. ಸಮಾಜವನ್ನು ಬಿಟ್ಟು ಮನುಷ್ಯನಿಲ್ಲ ವ್ಯಕ್ತಿಯಿಲ್ಲ. ಹೀಗೆ ಸಮಾಜ, ವ್ಯಕ್ತಿಗಳ ಅನ್ಯೋನ್ಯ ಹೊಂದಾಣಿಕೆಯಿರುವುದರಿಂದಲೇ, ಮಾನವ ಜೀವನವನ್ನು ಉದಾತ್ತಗೊಳಿಸುವುದಕ್ಕಾಗಿ ದಾಸಶ್ರೇಷ್ಠರಾದ ಪುರಂದರದಾಸರು ಸಮಾಜವನ್ನು ಜಾಗೃತಗೊಳಿಸಿ ಕರ್ತವ್ಯಪಾಲನೆಯನ್ನು ಅರುಹಿದ್ದಾರೆ. "ಮಾನವ ಜನ್ಮ ಬಹುದೊಡ್ಡದು ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ'' ಎಂಬಪದ್ಯದಲ್ಲಿ– 'ಕಾಲನ ದೂತರು ಕಾಲ ಹಿಡಿದೆಳೆವಾಗ ತಾಳು ತಾಳು ತಾಳೆಂದರೆ ತಾಳುವರೆ ದಾಳಿಬಾರದ ಮುನ್ನ ಧರ್ಮವ ಗಳಿಸಿರೋ' ಎಂದು ಎಚ್ಚರಿಕೆ ಕೊಟ್ಟಿದ್ದಾರೆ. 'ಅಂತಕನ ದೂತರಿಗೆ ಕಿಂಚಿತ್ತು ಭಯವಿಲ್ಲ. ಚಿಂತೆಯನು ಬಿಟ್ಟು ಶ್ರೀಹರಿಯ ನೆನೆ ಮನವೆ, ಕಟ್ಲೆ ತುಂಬಿದ ಮೇಲೆ ಕ್ಷಣಮಾತ್ರವಿರಲಿಲ್ಲ ಅಷ್ಟರೊಳು ಪುರಂದರವಿಠಲನ್ನು ಮನವೇ' ಎಂದು ವೈಯಕ್ತಿಕವಾಗಿ ಮನಸ್ಸಿಗೆ ಉಪದೇಶ ಮಾಡಿದ್ದಾರೆ.

"ಧರ್ಮೋರಕ್ಷತಿ – ರಕ್ಷಿತಃ" ಎನ್ನುವಂತೆ ಧರ್ಮದ ಬಗ್ಗೆ ಅನೇಕ ಮಹತ್ತ್ವದ ವಿಚಾರಗಳು ಪುರಂದರದಾಸರ ಪದ್ಯಗಳಲ್ಲಿ ಅಡಕವಾಗಿವೆ.

ಧರ್ಮವೇ ಜಯವೆಂಬ ದಿವ್ಯಮಂತ್ರ  
ಮರ್ಮವರಿತು ಮಾಡಬೇಕು ತಂತ್ರ  
ವಿಷವಿಕ್ಕಿದವನಿಗೆ ಷಡ್ರಸವನುಣಿಸಲು ಬೇಕು  
ಮೋಸಮಾಡುವವನ ಹೆಸರು ಮಗನಿಗಿಡಬೇಕು  
ಹಿಂದೆ ನಿಂದಿಪರನು ವಂದಿಸುತಲಿರಬೇಕು  
ಕುಂದೆಣಿಸುವವರ ಗೆಳೆತನ ಮಾಡಬೇಕು

ವಿದ್ವಾನ ಬೀಮಾಚಾರ್ಯ ಗುಡಿ

ಇಲ್ಲಿ ಸೂಚಿಸಿದ ನೀತಿಯ ಮಾತುಗಳು ಸತ್ಪುರುಷರ ಲಕ್ಷಣಗಳಾಗಿದ್ದರೂ ಸಾಮಾನ್ಯ ಜನರಿಗೆ ಮಾರ್ಗದರ್ಶನ ಮಾಡುವಂತಿವೆ. ನೆರೆಹೊರೆಯವರು ನಮಗೆ ಕೆಟ್ಟದ್ದನ್ನು ಮಾಡಿದರೂ ನಾವು ಅವರಿಗೆ ಒಳಿತನ್ನೇ ಬಯಸಬೇಕು. ಎಂಬ ವಿಷಯವು ಧಾರ್ಮಿಕವಾಗಿದೆ. 'ಏನು ಇಲ್ಲವೊ ಎರಡು ದಿನದ ಸಂಸಾರ ದಾನಧರ್ಮವಮಾಡಿ ಇದನರಿಯಬೇಕೋ ಮನುಜಾ'– ಎಂಬಲ್ಲಿ ಸಂಸಾರವು ಅಸ್ಥಿರವೆಂದು ಹೇಳಿದ್ದಲ್ಲದೆ, ದಾನಮಾಡಿರಿ, ಧರ್ಮವನ್ನಾಚರಿಸಿರಿ, ಎಂದು ಉಪದೇಶ ವಿತ್ತಿದ್ದಾರೆ. ಧರ್ಮ ಮತ ಜಾತಿ ಪಂಥಗಳ ಬಗ್ಗೆ ಸಂಕುಚಿತ ಭಾವನೆ ತೋರದೆ ಸರ್ವಧರ್ಮಗಳನ್ನು ವಿಶಾಲ ಮನೋಭಾವನೆಯಿಂದ ಕಂಡಿದ್ದಾರೆ. ಆವಕುಲವಾದರೇನು ಆವನಾದರೇನು. ಆತ್ಮಭಾವವರಿತಮೇಲೆ– ಎಂಬ ಪದ್ಯದಲ್ಲಿ. 'ಕುಲದಮೇಲೆ ಹೋಗಬೇಡ ಮನುಜಾ ಕುಲವಿಲ್ಲ ಜ್ಞಾನಿಗಳಿಗೆ' ಎಂದಿ



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್‌ನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿಧವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ದ್ದಾರೆ. ಪುರಂದರದಾಸರು ಸ್ವಂತಧರ್ಮನಿಷ್ಠೆಯಲ್ಲಿ ಮಧ್ವಮತಾನುಯಾಯಿಗಳು, ಭಾಗವತ ಧರ್ಮವನ್ನು ಪ್ರಸಾರಮಾಡಿ ಭಕ್ತಿಮಾರ್ಗವನ್ನು ಬಿತ್ತರಿಸಿದರು. ಅನ್ಯಮತಗಳನ್ನು ನಿಂದಿಸುವ ಖಂಡಿಸುವ ಗೋಜಿಗೆ ಹೋಗಲಿಲ್ಲ. ಸರ್ವಧರ್ಮಗಳನ್ನು ಸಮಾನತೆಯಿಂದ ಕಂಡಿದ್ದಾರೆ. 'ಎನಗಾಯಿತು ಶಿವದರುಶನ, ಶಿವರಾತ್ರಿಯ ಜಾಗರಣೆಯಲ್ಲಿ ಪಾತಾಳಗಂಗೆಯಲಿ ಸ್ನಾನಮಾಡಲು ಪಾತಕವೆಲ್ಲವೂ ಪರಿಹಾರವು ಜೋತಿರ್ಲಿಂಗನ ಧ್ಯಾನವ ಮಾಡಲು ದೂಷ್ಯತೆಯಿಲ್ಲ ಅನುದಿನವು- ಎಂಬ ಪದ್ಯವು ಶಿವಪಾರಮ್ಯವನ್ನು ವರ್ಣಿಸುತ್ತದೆ.

ಜಂಗಮರು ನಾವು ಜಗದೊಳು ಜಂಗಮರು ನಾವು, ಲಿಂಗಾಂಗಿಗಳು ಮಂಗಳವಂತರು ಭವಿಗಳೆಂತೆಂಬಿರಿ ಹರಗುರು ದೈವ, ಕೇಶವ ನಮ್ಮ ಮನೆದೈವ ವಿಭೂತಿ-ನಮಗುಂಟು ವಿಶ್ವೇಶ ನಮಗನುಂಟು ವಿರಕ್ತರು ನಾವು, ಶೀಲವಂತರು- ಎಂದು ಹೇಳುತ್ತ ವೀರಶೈವ ಸಂಪ್ರದಾಯದ ಲಿಂಗಾಂಗ ಸಾಮರಸ್ಯವನ್ನು ಸಮರ್ಥಿಸಿದ್ದಾರೆ.

'ಹೊಲೆಯ ಹೊರಗಿಹನೇ? ಊರೊಳಗಿಲ್ಲವೇ?' ಎಂದು ಕೇಳುವಲ್ಲಿ ಸಾರ್ಥಕತೆಯಿದೆ. ಜಾತಿಯಲ್ಲಿ ಹೊಲೆತನವಿಲ್ಲ, ಹೀನಗುಣಗಳೇ ಹೊಲೆತನವೆಂದು ಹೇಳಿದ್ದಾರೆ. ಶೀಲವನು ಕೈಕೊಂಡು ನಡೆಸದಾತ ಹೊಲೆಯ, ಉಂಡ ಮನೆಗೆರಡು ಬಗೆವವನೆ ಹೊಲೆಯ, ಅರಿತು ಆಚಾರಗಳನ್ನು ನಡೆಸಿದಾತ ಹೊಲೆಯ- ಹೀಗೆ ದುರ್ಗುಣ ಸಂಪನ್ನನೇ ಹೊಲೆಯನೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಯಾವ ಧರ್ಮದ ಬಗ್ಗೆಯೂ ಅಪಶ್ರುತಿ ನುಡಿಸದೆ, ಅಭಿಮಾನದಿಂದ ಅವುಗಳ ಮೇಲ್ಮೆಯನ್ನು ತಿಳಿಸಿದ್ದಾರೆ. ಸರ್ವಧರ್ಮಗಳನ್ನು ಸಮಾನತೆಯಿಂದ ಕಾಣಲು ಸೂಚಿಸಿದ್ದಾರೆ.

ವಿಜಯನಗರದ ಶ್ರೀಕೃಷ್ಣದೇವರಾಯರ ಆಳ್ವಿಕೆಯನಂತರ, ರಾಜಕೀಯದಲ್ಲಾದ ಕ್ರಾಂತಿ, ಶಾಹೀಅರಸರ ದಬ್ಬಾಳಿಕೆಯು ಜನತೆಯ ಜೀವನದಲ್ಲಿ ಕೋಲಾಹಲವನ್ನುಂಟು ಮಾಡಿದವು. ಎಲ್ಲ ಕಡೆಗೂ ಅಶಾಂತಿಯ ವಾತಾವರಣ ಹಬ್ಬಿಕೊಂಡಿತ್ತು.

ಇಂತಹ ಪರಿಸ್ಥಿತಿಯನ್ನು ಎದುರಿಸಿದ ಶ್ರೀ ಪುರಂದರದಾಸರು, ಸತ್ಯವಂತರಿಗಿದು ಕಾಲವಲ್ಲ ದುಷ್ಟ ಜನರಿಗೆ ಸುಭಿಕ್ಷಕಾಲ, ಉಪಕಾರ ಮಾಡಿದರೆ ಅಪಕರಿಸುವ ಕಾಲ, ಕರ್ಮಪಾತಕರಿಗೆ ಬಹುಸೌಖ್ಯಕಾಲ ಎಂದು ಹೇಳಿದ್ದಾರೆ. ಧರ್ಮಕ್ಕೆ ಕೈಬಾರದೀಕಾಲ, ಪಾಪಕರ್ಮಕ್ಕೆ ಮನಸೋಲೊದೀ ಕಾಲ, ಎಂದು ಹೇಳಿದ್ದಾರೆ. ಕಲಿಕಾಲದ ರೀತಿ ನೀತಿಗಳನ್ನು ನಿರೂಪಿಸಿದ್ದಾರೆ.

ಜೀವನದಲ್ಲಿ ಕಷ್ಟ ನಷ್ಟಗಳನ್ನು ಕಂಡಾಗ ಪುರಂದರದಾಸರು 'ಆರೇನು ಮಾಡುವರು ಆರಿಂದಲೇನಹುದು, ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು' ಎಂದು ಹಣೆಯ ಬರಹ (ದೈವ) ವನ್ನೆ ಎತ್ತಿ ಹಿಡಿದಿದ್ದಾರೆ. 'ಸಾಮಾನ್ಯವಲ್ಲವಿದು ಬ್ರಹ್ಮ ಬರೆದಬರಹ' ಎಂದು ಹೇಳುತ್ತ 'ನಾಮಾಡಿದ ಕರ್ಮ ಬಲವಂತವಾದರೆ, ನೀಮಾಡುವುದೇನೋ ದೇವಾ-ಮತಿಹೀನ, ಗತಿಹೀನನಾದ ನನಗೆ (ಮಾನವನಿಗೆ) ದಾಸರ ಸಂಗವಿತ್ತು ಮನ್ನಿಸಿ ಸಲಹು' ಎಂದು ಪರಮಾತ್ಮನಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.

ಸರ್ವಸಂಗ ಪರಿತ್ಯಾಗಮಾಡಿ ಸನ್ಯಾಸಿ ಜೀವನಕ್ಕೆ ಮಾರುಹೋದವರೆಲ್ಲ ಪ್ರಪಂಚದಲ್ಲಿದ್ದು ಪರಮಾರ್ಥವನ್ನು ಸಾಧಿಸಬೇಕೆಂಬುದು ಇವರ ಮತ. 'ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿಯ ನೆನೆಯುವ ಸೌಭಾಗ್ಯವಿರಲಿ,' ಎಂದಿದ್ದಾರೆ ಸಂಸಾರದಲ್ಲಿಯ ತಾಪತ್ರಯಗಳನ್ನು ಕಂಡು ಹೇಡಿಯಂತೆ ಹಿಂದೆ ಸರಿಯಬೇಡ, ಧೈರ್ಯದಿಂದ ಮುನ್ನುಗ್ಗಬೇಕು ಎಂಬಲ್ಲಿ ಈಸಬೇಕು ಇದ್ದು ಜೈಸಬೇಕು- ಎಂದಲ್ಲದೆ, ಬಂದದೆದ್ದಲ್ಲ ಬರಲಿ, ಗೋವಿಂದನ ದಯೆವೊಂದಿರಲಿ-ಎಂದು ಆಪೇಕ್ಷಿಸಿದ್ದಾರೆ. ಸಂಸಾರದಲ್ಲಿ ಹೇಗೆ ಇರಬೇಕೆಂಬುದರ ಸೂಕ್ತಿಯನ್ನು ಕೂಡ ಕಮಲಪತ್ರಮಿವಾಂಭಸ ಎಂದಿದ್ದಾರೆ. 'ನಾನಿನ್ನೊಳನ್ಯವ ಬೇಡುವದಿಲ್ಲ, ಎನ್ನ ಹೃದಯ ಮಂದಿರದೊಳು ನಿಂದಿರು', ಎಂದು ಬೇಡಿಕೊಂಡಿದ್ದಾರೆ. ಯಾರು ಹಂಗಿಗೂ ಒಳಗಾಗದ ವ್ಯಕ್ತಿತ್ವ ಅವರದು. ಅಂತೆಯೇ 'ನೀನ್ಯಾಕೋ, ನಿನ್ನ ಹಂಗ್ಯಾಕೋ, ನಿನ್ನ ನಾಮದ ಬಲವೊಂದಿದ್ದರೆ ಸಾಕೋ', ಎಂದು ಶ್ರೀಹರಿಯ ನಾಮವನ್ನೇನಂಬಿ, ತೀರ್ಥಯಾತ್ರೆಗಳನ್ನು ಮಾಡುತ್ತ ಪರಮಾತ್ಮನ ಗುಣಗಾನ ಮಹಾತ್ಮೆಗಳನ್ನು ಹೇಳುತ್ತ ಸಂಚರಿಸಿದರು. ಹರಿದಾಸರು ಉದರಂಭರಣಕ್ಕಾಗಿ ಅನ್ಯರ ಆಶ್ರಯಿಸದೆ, ಮಧುಕರ ವೃತ್ತಿಯನ್ನು ಕೈಕೊಂಡರು. ಹರಿದಾಸರಿಗೆ ಅವಶ್ಯಕವಾದ ಈ 'ಮಧುಕರ ವೃತ್ತಿಯು ನನ್ನದು, ಬಹುಚೆನ್ನದು,' ಎಂದು ಹೇಳುತ್ತ ಆದರ ಮೇಲ್ಮೆಯನ್ನು ಬಿತ್ತರಿಸಿದರು.

ಹೊನ್ನು, ಹೆಣ್ಣು, ಮಣ್ಣುಗಳಿಗೆ ಮನಸೋಲಬಾರದು, ಅವಾವುವೂ ಮಾನವನಿಗೆ ಶಾಶ್ವತ ಹಿತವನ್ನುಂಟು ಮಾಡಲಾರವು. 'ಆರುಹಿತವರು ನಿನಗೆ, ಈ ಮೂವರೊಳಗೆ ನಾರಿಯೋ, ಧಾರುಣಿಯೋ, ಬಲುಧನ ಸಿರಿಯೋ' ಎಂದು ಕೇಳಿ ಇದಾವುದು ಶಾಶ್ವತವಲ್ಲ, ಇವುಗಳ ಆಶೆ ಬಿಡಬೇಕು ಎಂಬ ಸೂಕ್ತಿಯನ್ನು ಕಾಗದ ಬಂದಿದೆ ಕಮಲನಾಭನದು, ಹೆಣ್ಣು ಹೆನ್ನು ಮಣ್ಣಿನಾಸೆ ಬಿಡಿರೆಂದು ಕಾಗದ ಬಂದಿದೆ, ಕಾಗದ ಓದಿಕೊಂಡು ಕಾಲವ ಕಳೆಯಿರೆಂದು- ಎಂಬ ಪದ್ಯದಲ್ಲಿ ವಿವರಿಸಿದ್ದಾರೆ. ನೋಡದಿರು ಪರಸ್ತ್ರೀಯ, ನೋಡಿದರೆ ಕೇಡಹುದು ತಪ್ಪದಿದೆಕೋ-ಎಂದು ಹೆಣ್ಣಿನ ಬಗ್ಗೆ, ದುಗ್ಗಾಣಿಯೆಂಬುದು ದುರ್ಜನರ ಸಂಗ ಆಚಾರ ಹೇಳೋದುದುಗ್ಗಾಣಿ, ನೀಚರ ಮಾಡೊದು ದುಗ್ಗಾಣಿ, ರೊಕ್ಕ ಎರಡಕ್ಕೂ ದುಃಖ ಕಾಣಕ್ಕ, ಇಲ್ಲದ ಅವಗುಣಗಳ ತರಿಸೋದು ರೊಕ್ಕ, ಇಲ್ಲದಿರಲು ಬಹುದುಃಖ ಕಾಣಕ್ಕ, ಎಂಬ ನೀತಿಯನ್ನು ತಿಳಿಸಿದ್ದಾರೆ.

ಸಮಾಜ ಹಿತವನ್ನೇ ಬಯಸುವ ಶ್ರೀ ಪುರಂದರ ದಾಸರು, ಸಮಾಜದಲ್ಲಿ ಕಂಡುಬರುವ ಲೋಪದೋಷಗಳನ್ನು ಎತ್ತಿ ತೋರಿಸಿದ್ದಾರೆ. 'ಒಳಗಿದ್ದ ಪಾಪವು ಹೊರಗೆ ಹೋದಿತೆಂದು ಕದವ ಮುಚ್ಚಿದಳಿಕೋ ಗಯ್ಯಾಳಿ ಮೂಳಿ ಎಂದು ಅನೀತಿವಂತರ ಅಧರ್ಮಕ್ಕೆ ಮನಸೆಳೆದ ದೃಷ್ಟಾಂತವು ಸ್ಪಷ್ಟವಾಗಿದೆ. ಮಡಿ ಮಡಿಯೆಂದು ಮಾರ್ವಾರು ಹಾರುತಿ ಮಡಿಯಲ್ಲೈತೋ. ಬಿಕನಾಸಿ, ಹುಟ್ಟ್ಯಾತ ಸೂತಕ, ಸ್ತ್ರ

ಸೂತಕ, ನಟ್ಟನಡುವೆ ನಿಂತ್ಯಾ ಬಿಕನಾಸಿ ಹರ್ಮವ ತೊಳೆದರೆ ಕರ್ಮವು ಹೋಗುವುದೇ ಮರ್ಮವ ತಿಳಿಯದೇ ಬಿಕನಾಸಿ' ಎಂದು ಅಂತರಂಗ ಶುದ್ಧಿಯಿಲ್ಲದವರನ್ನು, ಕೇವಲ ಮಡಿ ಮಡಿ, ಎಂದು ಹಾರಾಡುವ ಜೀವನವನ್ನು ಟೀಕಿಸಿದ್ದಾರೆ. ತೋರಿಕೆಯ ಮಡಿವಂತರನ್ನು ಬಿಕನಾಸಿ ಎಂದು ಕರೆದಿದ್ದಾರೆ. ಅಂತರಂಗದಲ್ಲಿ ಹೀನಗುಣಂಗಳನಿಟ್ಟುಕೊಂಡು ವ್ರತ ಆಚರಣೆಗಳಲ್ಲಿ ಸಜ್ಜನರಂತೆ ಸೋಗುಹಾಕುವ ಬಡಿವಾರದ ಭಕ್ತರನ್ನೂ ಕಂಡು ನಕ್ಕಿದ್ದಾರೆ. ಅದನ್ನೇ ನಗೆಯು ಬರುತಿದೆ,ನನಗೆ ನಗೆಯು ಬರುತಿದೆ, ಜಗದೊಳಿರುವ ಜಾಣರೆಲ್ಲರ ಹಗರಣವ ಕಂಡು, ಹರಿವ ನೀರೊಳಗೆ ಮುಳುಗಿ, ಬೆರಳು ಎಣಿಸುತಿಹರ ಕಂಡು, ತಾನು ವಿಷಯ ಪುಂಜವಾಗಿ ನಾಮ ನೆನೆಯುವರ ಕಂಡು, ಇಲ್ಲಿ ಡಂಭಾಚಾರವನ್ನು ಅಲ್ಲಗಳೆದಿದ್ದಾರೆ.

ಸಂಸಾರದಲ್ಲಿದ್ದುಕೊಂಡು ಸಮಾಜ ಜೀವಿಗಳಾದರೂ ಶ್ರೀಹರಿಯ ಭಜನೆಯನ್ನು ಮರೆಯಬಾರದು, ಇದುವೇ ನಿಜವಾದ ಸುಖ ಸಂಪತ್ತು. ಇದು ಭಾಗ್ಯ ಇದು ಭಾಗ್ಯವಯ್ಯಾ, ಪರಮನಾಥನ ಪಾದಭಜನೆ ಸುಖವಯ್ಯಾ. ಮಾನವನು ಜೀವನದ ವಿವಿಧ ರಂಗಗಳಲ್ಲಿ ಹೀಗೆ ಇರಬೇಕು ಎಂದು ಉಪದೇಶಿಸುತ್ತ ಕಲ್ಲಾಗಿ ಇರಬೇಕು ಕಠಿಣಭವತೊರೆಯೊಳಗೆ, ಬಿಲ್ಲಾಗಿ ಇರಬೇಕು ಬಲ್ಲವರೊಳು ಬೆಲ್ಲವಾಗಿರಬೇಕು ಬಂಧುಜನರೊಳಗೆ, ಮೆಲ್ಲನೆ ಮಾಧವನ ಮನ್ನದಿ ಮೆಚ್ಚಿಸಬೇಕು ಎನ್ನುತ್ತಾರೆ. ಹೀಗೆ ಭಕ್ತಿಮಾರ್ಗದಲ್ಲಿ ಸಮಾಜ ಸಂಸ್ಕಾರದಲ್ಲಿ ಹಿತವ ನುಡಿದ ಶ್ರೀಗುರು ಪುರಂದರದಾಸರನ್ನು ವಂದಿಸಿ ಈ ಪ್ರಬಂಧ ಮುಗಿಸುವೆನು.

ಮನ್ಮನೋಭೀಷ್ಟ ವರದಂ
ಸರ್ವಾಭೀಷ್ಟ ಫಲಪ್ರದಂ
ಪುರಂದರ ಗುರುಂ ವಂದೇ
ದಾಸಶ್ರೇಷ್ಠಂ ದಯಾನಿಧಿಂ

# ಉಡುಪಿಯ ಪರ್ಯಾಯ

ಉಡುಪಿ ಕೃಷ್ಣನ ಸನ್ನಿಧಿಯಲ್ಲಿ ನಿತ್ಯವೂ ಉತ್ಸವ, ನಿತ್ಯವೂ ಅನ್ನದಾನ, ನಿತ್ಯವೂ ಜ್ಞಾನದಾನ, ಇಲ್ಲಿನ ಸಂಪ್ರದಾಯ, ಪೂಜಾ ವಿಧಾನ ವಿಶಿಷ್ಟ, ವೈವಿಧ್ಯಪೂರ್ಣ. ಅದು ಇಲ್ಲಿಗೇ ಮೀಸಲು. ಏಳು ನೂರು ವರುಷಗಳ ಹಿಂದೆ ಆನಂದತೀರ್ಥರಿಂದ ಉಡುಪಿಯಲ್ಲಿ ಪ್ರತಿಷ್ಠೆಗೊಂಡ ಕೃಷ್ಣ, ನಂಬಿದ ಭಕ್ತರಿಗೆ ಸನ್ಮಂಗಳವನ್ನು ಕರುಣಿಸುವ ಆರಾಧ್ಯಮೂರ್ತಿ. ಮಧ್ವಕರಾರ್ಚಿತ ಕೃಷ್ಣ 'ಪೊಡಪಗೊಂಡಯ' ನೆಂದೇ ಜನಜನಿತ.

ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ಬಾಲಕೃಷ್ಣನನ್ನು ಪ್ರತಿಷ್ಠಾಪಿಸಿ, ಆತನ ಪೂಜೆ ನಿತ್ಯ ನಿರಂತರವಾಗಿ ನಡೆಯಲು ಎಂಟು ಮಂದಿ ಬಾಲಯತಿಗಳು ನೇಮಿಸಿ, ಅವರಿಗೆ ಅಷ್ಟಮಠಗಳನ್ನು ಸೃಷ್ಟಿಸಿದ ವಿಚಾರ ಎಲ್ಲರೂ ಬಲ್ಲರು. ಹಿಂದೆ ಎರಡು ತಿಂಗಳ ಕಾಲ ಒಬ್ಬ ಯತಿಗಳು ಸರದಿಯಂತೆ ಶ್ರೀಕೃಷ್ಣನ ಪೂಜೆಯನ್ನು ನಿರ್ವಹಿಸುವ ಪರಿಪಾಠವಿತ್ತು. ಪವಾಡ ಪುರುಷ ವಾದಿರಾಜರು ಈ ಅವಧಿಯನ್ನು ಎರಡು ವರ್ಷಗಳಿಗೆ ಹೆಚ್ಚಿಸಿ ಹೊಸ ಪರಂಪರೆಯನ್ನು ಸೃಷ್ಟಿಸಿದರು. ಅಂದಿನಿಂದ ಇಂದಿಗೂ ಅಷ್ಟಮಠದ ಯತಿಗಳು 14 ವರ್ಷಗಳಿಗೊಮ್ಮೆ ತಮ್ಮ ಸರದಿಯಂತೆ 2 ವರ್ಷದ ಶ್ರೀಕೃಷ್ಣ ಪೂಜೆಯ ಅಧಿಕಾರವನ್ನು ಚಾಚೂ ತಪ್ಪದೆ ನಿರ್ವಹಿಸುತ್ತಾ ಬಂದಿರುವರು.

## ಪರ್ಯಾಯೋತ್ಸವ

ಎರಡು ವರ್ಷಗಳಿಗೊಮ್ಮೆ ನಡೆಯುವ ಉಡುಪಿ ಪರ್ಯಾಯ ಜಗತ್ಪ್ರಸಿದ್ಧ. ಅಷ್ಟಮಠದ ಯತಿಗಳು ಸರದಿಯಂತೆ ಶ್ರೀಕೃಷ್ಣ ಪೂಜೆ ಹಾಗೂ ಕೃಷ್ಣಮಠದ ಸಮಸ್ತ ಆಡಳಿತದ ಅಧಿಕಾರವನ್ನು ಒಬ್ಬ ಯತಿಗಳು ಇನ್ನೊಬ್ಬ ಯತಿಗಳಿಗೆ ವಿಧ್ಯುಕ್ತವಾಗಿ ಹಸ್ತಾಂತರಿಸುವರು. ಇದೇ ಪರ್ಯಾಯ ಮಹೋತ್ಸವ. ಒಮ್ಮೆ ಪರ್ಯಾಯ ನಿರ್ವಹಿಸಿದ ಯತಿಗಳು ಮತ್ತೆ ತಮ್ಮ ಸರದಿಗಾಗಿ 14 ವರ್ಷ ಕಾಯಬೇಕು. 1986 ಜನವರಿ 18 ರಂದು ಫಲಿಮಾರು ಶ್ರೀ ವಿದ್ಯಾಮಾನ್ಯ ತೀರ್ಥರು, ಪೇಜಾವರದ ಶ್ರೀ ವಿಶ್ವೇಶತೀರ್ಥರಿಂದ ಅಧಿಕಾರ ವಹಿಸಿಕೊಂಡಿದ್ದರು. ಅವರು ಎರಡು ವರ್ಷದ ಪರ್ಯಾಯ ಅಧಿಕಾರ 1988 ಜನವರಿ 17 ರಂದು ಸಮಾಪ್ತಿಗೊಳ್ಳುತ್ತದೆ. ಮರುದಿನ ಜನವರಿ 18 ರಿಂದ ಮತ್ತೆ ಎರಡು ವರ್ಷ ಕಾಲ ಶ್ರೀಕೃಷ್ಣ ಪೂಜಾಧಿಕಾರ ಅದಮಾರು ಶ್ರೀಗಳವರದ್ದಾಗಿರುತ್ತದೆ.



ಈ ಬಾರಿ ಅದಮಾರು ಮಠದ ಕಿರಿಯ ಯತಿ ಶ್ರೀ ವಿಶ್ವಪ್ರಿಯತೀರ್ಥರು ಶುಭ ಮುಹೂರ್ತದಲ್ಲಿ ಸರ್ವಜ್ಞ ಪೀಠಾರೋಹಣ ಗೈಯಲಿದ್ದಾರೆ. ಹಿರಿಯ ಯತಿ ಶ್ರೀ ವಿಬುಧೇಶ ತೀರ್ಥರು ಮಾರ್ಗದರ್ಶಕರಾಗಿ ಶ್ರೀಕೃಷ್ಣ ಪೂಜೆಯ ಜವಾಬ್ದಾರಿಯುತ ಹೊಣೆಗಾರಿಕೆಯನ್ನು ಕಿರಿಯ ಯತಿಗಳಿಗೆ ವಹಿಸಲಿದ್ದಾರೆ. ಆಧ್ಯಾತ್ಮಿಕ ನಾಯಕತ್ವ ವಿಕಸನಗೊಳಿಸುವ ಸದುದ್ದೇಶದಿಂದ ಕಿರಿಯ ಯತಿಗಳನ್ನು ಪ್ರೇರೇಪಿಸುತ್ತಿರುವಾಗಿ ಶ್ರೀ ವಿಬುಧೇಶ ತೀರ್ಥರು ತಿಳಿಸಿದ್ದಾರೆ. 400 ವರ್ಷಗಳ ಹಿಂದೆ ಶ್ರೀ ವಾದಿರಾಜರು ತಮ್ಮ ಶಿಷ್ಯ ಶ್ರೀ ವೇದವೇದ್ಯತೀರ್ಥರಿಗೆ ಪರ್ಯಾಯ ಪೀಠ ಬಿಟ್ಟುಕೊಟ್ಟು ಸೋದೆಗೆ ತೆರಳಿದ್ದರು. ಆ ಬಳಿಕ ಶಿಷ್ಯನಿಗೆ ಅಧಿಕಾರ ವಹಿಸಿಕೊಡುತ್ತಿರುವ ನಿದರ್ಶನ ಇದೇ ಪ್ರಥಮ. ಶ್ರೀ ವಿಬುಧೇಶ ತೀರ್ಥರು 1956–57 ಹಾಗೂ 1972–73 ರಲ್ಲಿ ಎರಡು ಪರ್ಯಾಯಗಳನ್ನು ಯಶಸ್ವಿಯಾಗಿ ಪೂರೈಸಿ: ಇದಗಿಬಂದ ಮೂರನೇ ಪರ್ಯಾಯವನ್ನು ಶಿಷ್ಯನಿಗೆ ಒಪ್ಪಿಸುತ್ತಿರುವುದು ಈ ಪರ್ಯಾಯದ ವೈಶಿಷ್ಟ್ಯ. ಪರ್ಯಾಯ ಮೆರವಣಿಗೆ ಹೊರಡುವ 'ಜೋಡುಕಟ್ಟೆ' ಈ ಬಾರಿ ವಿಶೇಷ ಕಲಾತ್ಮಕ ರೂಪು ತಳೆದಿದೆ. ಮೆರವಣಿಗೆ ತೆಂಕುಪೇಟೆಯ ಬದಲಾಗಿ ಕವಿ ಮುದ್ದಣ ರಸ್ತೆ, ಕನಕದಾಸ ರಸ್ತೆ ಮೂಲಕವಾಗಿ ಬರಲಿರುವುದು ಈ ಬಾರಿಯ ವಿಶೇಷ. ಮೆರವಣಿಗೆಗೆ ಆಕರ್ಷಕ, ವರ್ಣರಂಜಿತ ಟ್ಯಾಬ್ಲೋಗಳು, ರಾಷ್ಟ್ರೀಯ ಸ್ತಬ್ಧ ಚಿತ್ರಗಳು ಹೊರನಾಡುಗಳಿಂದಲೂ ಬರುವ ನಿರೀಕ್ಷೆಯಿದೆ. ಪರ್ಯಾಯೋತ್ಸವ ನಿಮಿತ್ತ ವಿಶೇಷ ಸಭಾಕಾರ್ಯಕ್ರಮ; ಸಾಂಸ್ಕೃತಿಕ ಮನರಂಜನಾ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಲಾಗುತ್ತದೆ. ಉಡುಪಿಯ ಪರ್ಯಾಯ ದೇಶವಿದೇಶಿ ಪ್ರವಾಸಿಗರನ್ನು ಆಕರ್ಷಿಸುತ್ತದೆ.



## ಪರ್ಯಾಯ ಶ್ರೀಗಳು

ಶ್ರೀ ನರಸಿಂಹತೀರ್ಥರು ಅದಮಾರು ಮಠದ ಮೂಲಯತಿಗಳು. ಚತುರ್ಭುಜ ಕಾಲೀಯಮರ್ದನಕೃಷ್ಣ ಶ್ರೀ ಮಧ್ವಾಚಾರ್ಯರು ಅವರಿಗೆ ಕರುಣಿಸಿದ ಆರಾಧ್ಯ ಮೂರ್ತಿ. ಪರಂಪರೆಯ 31ನೆಯ ಯತಿಗಳು ಶ್ರೀ ವಿಬುಧೇಶ ತೀರ್ಥರು, ಈಗಿನ ಪೀಠಾಧಿಪತಿಗಳು. ಕಿರಿಯಯತಿ ಶ್ರೀ ವಿಶ್ವಪ್ರಿಯ ತೀರ್ಥರು ಅವರ ಶಿಷ್ಯರು.

ಕಾರ್ಕಳ ತಾಲೂಕು ಇನ್ನ ಎಂಬಲ್ಲಿ ಶ್ರೀ ಗುರುರಾಜ ಮುಚ್ಚಿಂತಾಯ ದಂಪತಿಗಳ ಪುತ್ರನಾಗಿ ಜನಿಸಿದ ರಾಘವೇಂದ್ರರು ಇನ್ನ ಹಾಗೂ ಫಲಿಮಾರಿನಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿದರು. 15ರ ಪ್ರಾಯದಲ್ಲಿ 2–6–1972ರ ಪರಿಧಾವಿ ಸಂ॥ ನಿಜ ವೈಶಾಖ ಬಹುಳ ಪಂಚಮಿಂದು ಶ್ರೀ ವಿಶ್ವಪ್ರಿಯ ತೀರ್ಥರೆಂಬ ಹೆಸರಿನಲ್ಲಿ ಅದಮಾರು ಮಠದ ಯತಿಗಳಾಗಿ ದೀಕ್ಷಾಬದ್ಧರಾದರು. ಫಲಿಮಾರು ಶ್ರೀ ವಿದ್ಯಾಮಾನ್ಯ ತೀರ್ಥರಲ್ಲಿ ಸಕಲ ವೇದವಿದ್ಯಾ ಪಾರಂಗತರಾಗಿ, ಶಾಸ್ತ್ರಾಭ್ಯಾಸಗಳ ಪಾಂಡಿತ್ಯ ಗಳಿಸಿದರು. ಗುರುಗಳಿಂದ ಕಲಿತ ಶ್ರೀಮನ್ನ್ಯಾಯಸುಧಾ ಗ್ರಂಥಾಧ್ಯಯನವನ್ನು ಶಿಷ್ಯರಿಗೂ ಕಲಿಸಿ ಶ್ರೀ ವೇದವ್ಯಾಸರಿಗೆ ಪ್ರವಚನ ಸೇವೆ ಅರ್ಪಿಸಿದ್ದಾರೆ. ಪ್ರವಚನ, ಧಾರ್ಮಿಕ ಉಪನ್ಯಾಸಗಳಲ್ಲೂ ಪಳಗಿದವರು. ಉಡುಪಿಯಲ್ಲಿ ಅದಮಾರು ಪರ್ಯಾಯ ಅನುದಿನವೂ ಜ್ಞಾನದಾನ, ವಿದ್ಯಾದಾನ, ಅನ್ನದಾನಗಳಿಗೆ ಹೆಸರಾದುದು.

ಅದಮಾರು ಶ್ರೀಗಳು ಉಡುಪಿ, ಅದಮಾರು, ಪಡುಬಿದ್ರಿ, ಬೆಂಗಳೂರು, ಮುಂಬಯಿ, ಸಂಗಮೇಶ್ವರ ಪೇಟೆ, ಭದ್ರಾವತಿ, ನವದೆಹಲಿಗಳಲ್ಲಿ ವಿದ್ಯಾಸಂಸ್ಥೆಗಳನ್ನು ತೆರೆದು ವಿದ್ಯಾದಾನಿಗಳೆನಿಸಿದ್ದಾರೆ. ಈ ಬಾರಿಯ ಪರ್ಯಾಯಾವಧಿಯಲ್ಲಿ ಕೃಷ್ಣ ಮಠದ ಸಂಕೀರ್ಣ ಅಭಿವೃದ್ಧಿ; ತತ್ತ್ವಜ್ಞಾನ ಪ್ರಸಾರ; ಮಾಧ್ವತತ್ತ್ವಜ್ಞಾನ ಚಿತ್ರಮಯ ಪುಸ್ತಕ ಪ್ರಕಟಣೆ; ನೂರು ಮಂದಿ ವಟುಗಳಿಗೆ ವೇದತ್ರಯಗಳಲ್ಲಿ ಸ್ವಶಾಖಾಭ್ಯಾಸ ವ್ಯವಸ್ಥೆ; ಬೆಳ್ಳಿರಥ ಪರಿಷ್ಕರಣಕಾರ್ಯ ಮುಂತಾದ ಯೋಜನೆಗಳನ್ನು ಹಮ್ಮಿಕೊಂಡಿದ್ದಾರೆ. ದಕ್ಷಿಣೋತ್ತರ ಭಾರತ ತೀರ್ಥಯಾತ್ರಾ ಸಂಚಾರ ಹೊರಟಿರುವ ಶ್ರೀ ವಿಬುಧೇಶತೀರ್ಥರು – ಶ್ರೀ ವಿಶ್ವಪ್ರಿಯತೀರ್ಥರು 1988 ಜನವರಿ 4 ರಂದು ಉಡುಪಿಯ ಪುರಪ್ರವೇಶಗೈಯಲಿದ್ದಾರೆ. ಜನವರಿ 18 ರಂದು ಪರ್ಯಾಯದ ಸಂಭ್ರಮ.

## ಯುವವಾಣಿ

# ಹಾಸ್ಯ

ನಮ್ಮ ಜೀವನ ಸೀಮಿತ. ಈ ಸೀಮಿತ ಅವಧಿಯಲ್ಲಿ ನಾವೂ ನಕ್ಕು ನಲಿಯುತ್ತ ಇತರರನ್ನೂ ನಗಿಸುತ್ತಾ ಬಾಳುವುದೇ ಜೀವನದ ಪ್ರಮುಖ ಧ್ಯೇಯಗಳಲ್ಲಿ ಒಂದು. ಇದನ್ನೇ ಡಾ॥ ಡಿ. ವಿ. ಜಿ. ಯವರು–

ನಗುವು ಸಹಜದ ಧರ್ಮ; ನಗಿಸುವುದು
ಪರಧರ್ಮ
ನಗುವ ಕೇಳುತ ನಗುವುದತಿಶಯದ
ಧರ್ಮ ।
ನಗುವ ನಗಿಸುವ ನಗಿಸಿ ನಗುತ
ಬಾಳುವ ವರವ
ನಿಗೆ ಸ್ತೀನು ಬೇಡಿಕೊಳೊ
ಮಂಕುತಿಮ್ಮ ॥

ಎಂಬುದಾಗಿ 'ಮಂಕುತಿಮ್ಮನ ಕಗ್ಗ'ದ ಮೂಲಕ ನಮಗೆ ಆದೇಶವಿತ್ತಿದ್ದಾರೆ. ಇದನ್ನೇ ಪೂರ್ವಾಚಾರ್ಯರು ಹೀಗೆ ಹೇಳಿದ್ದಾರೆ.

"ಸಂತೋಷಂ ಜನಯೇತ್ಪ್ರಾಜ್ಞಃ ತದೇವೇಶ್ವರ ಪೂಜನಮ್ ।" ಅಂದರೆ ಮತ್ತೊಬ್ಬರಿಗೆ ಸಂತೋಷವಾಗುವಂತೆ ಮಾತನಾಡುವುದು ಈಶ್ವರನ ಪೂಜೆಗೆ ಸಮಾನವೆಂದಿದ್ದಾರೆ.

ಹಾಗಾದರೆ ಮತ್ತೊಬ್ಬರನ್ನು ನಗಿಸುವುದು ಹೇಗೆ? ಅವರನ್ನು ಸಂತೋಷಚಿತ್ತರನ್ನಾಗಿಸುವುದು ಹೇಗೆ? ಇದು ಬಹುಸ ಲಭ. ನಾವು ಯಾವಾಗಲೂ ಸರಸಿಗಳಾಗಿದ್ದರೆ ಸಾಕು. ಒಬ್ಬ ಸರಸಿಯ ಸುತ್ತ ನಾಲ್ಕಾರು ಮಂದಿ ಸೇರುತ್ತಾರೆ. ಆತನ ಮಾತನ್ನು ಕೇಳಲು ತವಕಪಡುತ್ತಾರೆ. ತಾವು ಪ್ರವಾಸ ಹೋದೆಡೆಗಳಿಗೆಲ್ಲಾ ಈತನನ್ನೂ ಒಯ್ಯುತ್ತಾರೆ ಇದಕ್ಕೆ ಕಾರಣ ಆತನ ಮಾತಿನಿಂದ ತಾವು ನಕ್ಕುನಲಿಯಬಹುದೆಂಬುದೇ ಆಗಿದೆ.

ಪೂರ್ವೋಕ್ತ ಕಾರಣಕ್ಕೋಸ್ಕರವೇ ರಾಜ ಮಹಾರಾಜರುಗಳು ತಮ್ಮ ಆಸ್ಥಾನದಲ್ಲಿ 'ವಿದೂಷಕ' ನೆಂಬುವನೊಬ್ಬನನ್ನು ಸಂಬಳ ಕೊಟ್ಟು ಇಟ್ಟುಕೊಳ್ಳುತ್ತಿದ್ದರು. ಈತನ ಕರ್ತವ್ಯವೆಂದರೆ ರಾಜನನ್ನೂ ಮತ್ತು ಆಸ್ಥಾನಿಕರನ್ನೂ ನಗಿಸುವುದು ಪ್ರತಿಯೊಂದು ಸಂಸ್ಕೃತ ನಾಟಕಗಳಲ್ಲೂ ರಾಜನ ಜತೆ ಈ ವಿದೂಷಕ ಇದ್ದೇ ಇರುತ್ತಾನೆ. ಇದಕ್ಕೊಂದು ನಿದರ್ಶನವೆಂದರೆ ವಿಜಯನಗರದ ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ತೆನಾಲಿ ರಾಮಕೃಷ್ಣ. ಹೀಗೆಯೇ ಅಕ್ಬರನ ಆಸ್ಥಾನದಲ್ಲಿ ಬೀರಬಲ್ ಇತ್ಯಾದಿ.

ಹಾಸ್ಯವೆಂದರೆ ಸರಸ. ಸರಸ ಸ್ವಲ್ಪ ಹೆಚ್ಚಾದರೂ ವಿರಸವೇನಿಲ್ಲವಂತೆ! ಅದನ್ನು ಸುಭಾಷಿತಕಾರರೇ ಸ್ಪಷ್ಟಪಡಿಸಿದ್ದಾರೆ.

ಸಾಕ್ಷರಾ ವಿಪರೀತಶ್ಚೇತ್
ರಾಕ್ಷಸಾ ಏವ ಕೇವಲಮ್ ।
ಸರಸಂ ವಿಪರೀತಶ್ಚೇತ್
ಸರಸತ್ವಂ ನ ಮುಂಚತೀ ॥

'ಸಾಕ್ಷರಾ' ಎಂಬ ಪದವನ್ನು ಬಲದಿಂದ ಎಡಕ್ಕೆ ಅಂದರೆ ತಲೆಕೆಳಕಾಗಿ ಓದಿದರೆ ಅದು 'ರಾಕ್ಷಸಾ' ಎಂದಾಗುತ್ತದೆ. ಆದರೆ 'ಸರಸ' ಎಂಬ ಪದವನ್ನು ಹೇಗೆ ಓದಿದರೂ ಅದು 'ಸರಸ' ವಾಗಿಯೇ ಉಳಿಯುತ್ತದೆ. ಇದರ ಅರ್ಥ. ಅಕ್ಷರಸ್ಥನು ವಿಪರೀತನಾದರೆ ಆತನು ಕೇವಲ ರಾಕ್ಷಸನಾಗುತ್ತಾನೆ. ಅಂದರೆ ರಾಕ್ಷಸೀಗುಣಗಳನ್ನು ಹೊಂದುತ್ತಾನೆ. ಆದರೆ ಸರಸವು ಸ್ವಲ್ಪ ಹೆಚ್ಚಾದರೂ ಅದರಿಂದೇನೂ ಬಾಧಕವಿಲ್ಲ. ಸರ್ವಜ್ಞಕವಿಯಂತೂ,

"ಸರಸ ಸಜ್ಜನಿಕೆಯುಲ್ಲದವನ ಸಖ್ಯ
ಬೆರಸಲೇ ಬೇಡ"

ಎಂದಿದ್ದಾನೆ. ಸ್ನೇಹವನ್ನು ಮಾಡಬೇಕಾದರೆ ಸರಸಿಯ ಜತೆ ಮಾಡಬೇಕಂತೆ. ಮೂರುಹೊತ್ತು ಮುಖಗಂಟು ಹಾಕಿಕೊಂಡಿರುವವನ ಸಂಗಡ ಸ್ನೇಹಮಾಡುವುದರಿಂದೇನು ಪ್ರಯೋಜನ?

ಆದರೆ ಈ ಸರಸವನ್ನು ಕಾಲ, ದೇಶ ಹಾಗೂ ಸಂದರ್ಭಗಳನ್ನು ಅರಿತು ಮಾಡಬೇಕು. ಇದನ್ನೇ ಸರ್ವಜ್ಞನು,

"ಅರಸನೋಲಗದೊಳಗೆ ಸರಸವಾಡಲಿ
ಬೇಡ ।
ಸರಸ ನಿಂದ್ಯದೊಳಗಿರಬೇಡ ।"

ಎನ್ನುತ್ತಾನೆ. ರಾಜಸಭೆ ಅಂದರೆ ಗಂಭೀರ ವಾತಾವರಣವಿರುವ ಸಂದರ್ಭಗಳಲ್ಲಿ ಸರಸ ಕೂಡದು. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಹಾಸ್ಯ ಮತ್ತೊಬ್ಬರ ಮನನೋಯಿಸುವಂತಿರಬಾರದು. ಆಗ ಅದು ವಿರಸವೇ ಆಗುತ್ತದೆ.

'ನಗು ಆರೋಗ್ಯದ ಮೂಲ' ವೆಂದರೆ ನಿಮಗೆಲ್ಲ ಆಶ್ಚರ್ಯವಾದೀತು. ಆಯುರ್ವೇದಾಚಾರ್ಯರಾದ ಚರಕರು 'ಚರಕಸಂಹಿತೆ' ಎಂಬ ಆಯುರ್ವೇದ ಗ್ರಂಥದಲ್ಲಿ 'ಸದ್ವೃತ್ತ' ಎಂಬ ವಿಭಾಗದಲ್ಲಿ ಮನುಷ್ಯ ಒಂದು ದಿನಕ್ಕೆ ಒನ್ಮೆಯಾದರೂ ನಗಬೇಕೆಂದಿದ್ದಾರೆ. ದೇಹಸ್ವಾಸ್ಥ್ಯ ಮತ್ತು ಮಾನಸಿಕಸ್ವಾಸ್ಥ್ಯವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇವೆರಡರಲ್ಲಿ ಯಾವುದು ಸವಕಲಾದರೂ ನಾಣ್ಯವು ಹೇಗೆ ಚಲಾವಣೆಗೆ ಬರುವುದಿಲ್ಲವೋ ಅಂತೆಯೇ ದೇಹ ಮತ್ತು ಮಾನಸಿಕ ಸ್ವಾಸ್ಥ್ಯ. ಇವೆರಡರ ಸ್ವಾಸ್ಥ್ಯವಿಲ್ಲದವನು ಖಂಡಿತ ನಗಲಾರ. ಚಿತ್ತದ ದುಗುಡ ಹಾಸ್ಯದಿಂದ ದೂರವಾಗುತ್ತದೆ. ಒಂದು ಹಾಸ್ಯಪ್ರಸಂಗವನ್ನು ಕೇಳಿದೊಡನೆಯೇ ಸಹಜವಾಗಿಯೇ ನಗುಬರುತ್ತದೆ. ಇದರಿಂದ ಮನಸ್ಸು ಹಗುರವಾಗುತ್ತದೆ. ಆದುದರಿಂದಲೇ ಹಾಸ್ಯದಿಂದ ಕೂಡಿದ ಮನೋರಂಜನೆ ನಮಗೆ ಅತಿ ಪ್ರಿಯವೆನಿಸುತ್ತದೆ. ಗಂಭೀರ ಪ್ರಸಂಗಗಳು ಸಿನಿಮಾ ಮತ್ತು ನಾಟಕಗಳಲ್ಲಿ ಮನೋರಂಜನೆಯನ್ನುಂಟುಮಾಡಬಹುದಾದರೂ ಹಾಸ್ಯದ ಪ್ರತಿಕ್ರಿಯೆ ಅದಕ್ಕಿಲ್ಲವೆಂದೇ ಹೇಳಬಹುದು. ಆದುದರಿಂದಲೇ ಯಕ್ಷಗಾನದಲ್ಲಿ 'ಕೋಡಂಗಿ', ನಾಟಕದಲ್ಲಿ 'ವಿದೂಷಕ', ಸರ್ಕಸ್ಸಿನಲ್ಲಿ ಚಾರ್ಲಿ, ಸಿನಿಮಾದಲ್ಲಿ ಹಾಸ್ಯಧಾರ–ಇವರುಗಳಿಗೆ ಪ್ರಾಧಾನ್ಯ ಕೊಟ್ಟಿದ್ದಾರೆ.

ಕೋಪ ಬಂದ ವ್ಯಕ್ತಿಯನ್ನು ಶಾಂತನನ್ನಾಗಿ ಮಾಡಲು ಇರುವ ಏಕೈಕ ಅಸ್ತ್ರ




ಬಂಗಾಳದಲಿ ಜನಿಸಿದನು
ನರೇಂದ್ರ ಹೆಸರನು ಧರಿಸಿದನು ।
ಚಿತ್ತವನಿರಿಸಿ ಓದಿದನು
ಅಮಿತ ಜ್ಞಾನದ ಗಳಿಸಿದನು ॥ ೧

ಪರಮ ಹಂಸರ ನೋಡಿದನು
ಭಕುತಿಲಿ ಚರಣಕೆ ಎರಗಿದನು ।
ಧೀರ ವಿವೇಕನು ಎನಿಸಿದನು
ವರ ಸನ್ಯಸನವ ಹೊಂದಿದನು ॥ ೨

ಕಾವಿಯ ಉಡುಗೆಯ ಧರಿಸಿದನು
ಅಮೇರಿಕ ದೇಶವ ಸೇರಿದನು ॥
'ಸೋದರ–ಸೋದರಿ' ಎನ್ನುತ ಸರ್ವರ
ಹಿಂದು ಧರ್ಮಕೆ ಮಣಿಸಿದನು ॥ ೩
ವೇದ ಪುರಾಣವ ಓದಿದನು
ಎದ್ದೇಳಲು ಕರೆ ನೀಡಿದನು ॥
ಅಧ್ಯಾತ್ಮ ಶಿಖರದ ಆನಂದ
ಭಾರತ ದೇಶದ ಶ್ರೀಗಂಧ ॥ ೪

—'ಕವಿತಾಕೃಷ್ಣ'



ವೆಂದರೆ ಹಾಸ್ಯವೊಂದೇ. ಮತ್ತಾವ ಧರ್ಮ ಬೋಧೆಗಳೂ ಆ ಸಮಯದಲ್ಲಿ ಕೆಲಸ ಮಾಡುವುದಿಲ್ಲ. ಒಂದಾದ ಮೇಲೊಂದರಂತೆ ಹಾಸ್ಯದ ಮಾತುಗಳನ್ನು ಹೇಳುತ್ತಿದ್ದರೆ ಒವೆಕ್ಕೆಯಾದರೂ ಅವನು ನಕ್ಕೇನಗುತ್ತಾನೆ. ಅಲ್ಲಿಗೆ ಅವನ ಕೋಪ ಇತಿಶ್ರೀಯನ್ನು ಹಾಡುತ್ತದೆ.

ಮನೋರಂಜನೆಯ ಮುಖ್ಯಗುರಿಯೆ ಮನಸ್ಸನ್ನು ಮುದಗೊಳಿಸುವುದು. ಮನಸ್ಸನ್ನು ಮುದಗೊಳಿಸಿ ಚಿತ್ತದ ಪ್ರಸನ್ನತೆಯನ್ನು ಪುನಃಸ್ಥಾಪಿಸುವಲ್ಲಿ ಹಾಸ್ಯದ ಪಾತ್ರ ಬಲು ಹಿರಿದು ಆದುದರಿಂದಲೇ ಸಂಸ್ಕೃತದ ಲಾಕ್ಷಣಿಕನಾದ ಧನಂಜಯನು ದಶರೂಪಕಗಳಲ್ಲಿ 'ಪ್ರಹಸನ' ವನ್ನೂ ಹೇಳಿದ್ದಾನೆ. 'ಪ್ರಹಸನ' ವೆಂದರೆ ಹಾಸ್ಯಪ್ರಧಾನವಾದ ನಾಟಕ. ಪ್ರಹಸನಗಳಲ್ಲಿ ಮೂರು ಬಗೆ. ಅವುಗಳಲ್ಲಿ 'ಶುದ್ಧ ಪ್ರಹಸನ' ವು ಅಪೇಕ್ಷಣೀಯ ಮಾತ್ರವಲ್ಲದೆ ಅತ್ಯಗತ್ಯ. 'ಶುದ್ಧ ಪ್ರಹಸನ'ವೆಂದರೆ ಮೇಲ್ಮಟ್ಟದ ಹಾಸ್ಯ.

ಹಾಸ್ಯದ ನಗುವಿಗೆ ಸಂಬಂಧಿಸಿದಂತೆ ಜನರನ್ನು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು. ಯಾವುದಾದರೂ ಒಂದು ಹಾಸ್ಯದ ಮಾತನ್ನು ಕೇಳಿದ ತಕ್ಷಣವೇ ನಗುವವರು ಮೊದಲನೆಯ ವರ್ಗ. ಹಾಸ್ಯಗಾರನು ಹೇಳಿದ ಹಾಸ್ಯ ಇವರಿಗೆ ತಕ್ಷಣವೇ ಅರ್ಥವಾಗಿದೆ ಎಂದರ್ಥ. ಹಾಸ್ಯದ ಮಾತನ್ನು ಕೇಳಿದ ಸ್ವಲ್ಪ ಸಮಯದನಂತರ ನಗುವವರು ಎರಡನೆಯ ವರ್ಗ. ಇವರಿಗೆ ಹಾಸ್ಯದ ಅರ್ಥ ಬೇಗ ಗ್ರಾಹ್ಯವಾಗುವುದಿಲ್ಲ. ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆ. ಹಾಸ್ಯವು ಅರ್ಥವಾಗಲಿ, ಬಿಡಲಿ, ನಗುತ್ತಿರುವವರನ್ನು ನೋಡಿ ಇವರೂ ನಕ್ಕುಬಿಡುತ್ತಾರೆ, ಇದಕ್ಕೆ ಕಾರಣ ಎಲ್ಲಿ ಮತ್ತೊಬ್ಬರು ತಮ್ಮನ್ನು ನೋಡಿ ನಗುತ್ತಾರೋ ಎಂಬ ಹೆದರಿಕೆ ಇವರಿಗೆ. ಇವರೇ ಮೂರನೇ ವರ್ಗದ ಶ್ರೋತೃಗಳು.

# ತ್ಯಾಗರಾಜರ ಪಂಚರತ್ನ ಕೃತಿಗಳು

ಸಂಗೀತ ಪ್ರಪಂಚದಲ್ಲಿ ಪಂಚರತ್ನ ಕೃತಿಗಳೆಂದು ಪ್ರಸಿದ್ಧವಾಗಿರುವ ದಿವ್ಯಮಂಗಳ ಭವ್ಯ ಕೃತಿಗಳನ್ನು ರಚಿಸಿದ ಮಹಾನ್ ವಾಗ್ಗೇಯಕಾರ ಶಿರೋಮಣಿ ತ್ಯಾಗರಾಜ ಸ್ವಾಮಿಯವರು ಈ ಐದು ಕೃತಿಗಳಲ್ಲಿ, ತಮ್ಮ ಸಮಸ್ತ ಸಂಗೀತಕಲಾ ಪ್ರೌಢಿಮೆಯನ್ನು ಎರಕ-ಹೊಯ್ದಿದ್ದಾರೆ. ಸ್ವರ ಸಾಹಿತ್ಯ ಜೋಡಣೆಯಲ್ಲಿ ಅತ್ಯದ್ಭುತ ಜಾಣ್ಮೆ ಈ ಕೃತಿಗಳ ವೈಶಿಷ್ಟ್ಯ. ಈ ರಚನೆಗಳ ಹಿಂದೆ ಜನ ಜನಿತವಾಗಿರುವ ಕಥೆಗಳೇನೇ ಇರಲಿ, ಈ ಕೃತಿಗಳ ಬಗ್ಗೆ ಗಂಭೀರ ಚಿನ್ತನೆ ಅತ್ಯಗತ್ಯ.

15 ನೇ ಮೇಳಕರ್ತ ಮಾಯಾಮಾಳವ ಗೌಳದಲ್ಲಿ ಜನ್ಯವಾದ ಗೌಳ, 22 ನೇ ಮೇಳ ಕರ್ತ ಖರಹರಪ್ರಿಯದಲ್ಲಿ ಜನ್ಯವಾದ ಶ್ರೀ, 36ನೇ ಮೇಳಕರ್ತ ಚಲನಾಟದಲ್ಲಿ ಜನ್ಯವಾದ ನಾಟ, 39 ನೇ ಮೇಳಕರ್ತ ಝಾಲವರಾಳಿಯಲ್ಲಿ ಜನ್ಯವಾದ ವರಾಳಿ. 29ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯವಾದ ಆರಭಿ– ಈ ಐದು ರಾಗಗಳಲ್ಲಿ ಸದ್ಗುರು ತ್ಯಾಗರಾಜ ಸ್ವಾಮಿಯವರು ಈ ಪಂಚರತ್ನ ಕೃತಿಗಳನ್ನು ರಚಿಸಿದ್ದಾರೆ. ಜನಕರಾಗಗಳಿಗಿಂತ ಜನ್ಯ ರಾಗಗಳು ಹೆಚ್ಚು ರಮಣೀಯವಾಗಿ ಕಂಡು ಬರುವುದರಿಂದ ಅಥವ ತ್ಯಾಗರಾಜರ ರಸ ಸ್ಪರ್ಶಕ್ಕೆ ಸಿಕ್ಕುವ ಭಾಗ್ಯ ಈ ರಾಗಗಳಿಗಿದ್ದುದರಿಂದಲೋ, ಈ ಐದು ರಾಗಗಳು ಸಂಗೀತ ಪ್ರಪಂಚದಲ್ಲಿ ಪ್ರಸಿದ್ಧವಾಗಿವೆ. ವಿವಿಧ ರಾಗಾಭಿಮಾನಿ ದೇವತೆಗಳೆಲ್ಲ ಸದ್ಗುರು ತ್ಯಾಗರಾಜರಿಗೆ ಕೈವಶವಾಗಿದ್ದರು.

ವ್ಯಕ್ತಿಯ ಸಾಧನೆ, ತಪಸ್ಸು ಏನೇ ಇರಲಿ, ದೈವಾನುಗ್ರಹ ಅತಿಮುಖ್ಯ. ರಾಮಾನುಗ್ರಹ ಸಂಪನ್ನರಾದ ಈ ವಾಗ್ಗೇಯಕಾರ ಶಿರೋಮಣಿಯ ಅತ್ಯದ್ಭುತ ವಿನೂತನ ಸೃಷ್ಟಿ ಈ ಪಂಚರತ್ನ ಕೃತಿಗಳು. ಸಂಗೀತ ಕಲಾರಸಿಕರಿಗೆ ಈ ಪಂಚರತ್ನ ಕೃತಿಗಳು ಪಂಚಾಮೃತದಂತೆ ರುಚಿಯಾಗಿವೆ. ಕೃತಿಗಳಲ್ಲಿ ಸಂಗೀತಪ್ರಧಾನವೇ, ಸಾಹಿತ್ಯಪ್ರಧಾನವೇ ಎಂಬುದು ಬಲುಹಳೆಯ ಪ್ರಶ್ನೆ. ಸಂಗೀತ ಸಾಹಿತ್ಯಗಳಿಗೆ ಅವಿನಾಭಾವ ಸಂಬಂಧವಿದೆ – ಒಂದೇ ನಾಣ್ಯದ ಎರಡು ಮುಖಗಳಂತೆ.

### ರಾಗ – ವರಾಳಿ – ಕನಕನ ರುಚಿರ

ಆರೋಹಣ – ಸಗರಿ ಗಮ ಪದನಿಸ

ಅವರೋಹಣ – ಸನಿದಪ ಮಗರಿಸ

ಈ ಕೀರ್ತನೆಯ ಭಾವವೇನು ? ತ್ಯಾಗರಾಜ ಸ್ವಾಮಿಯವರು ತಮ್ಮ ಅಂತರಂಗದಲ್ಲಿ ಅನುದಿನವೂ ದರ್ಶನಮಾಡುತ್ತಿದ್ದ ರಘು ರಾಮಚಂದ್ರನ, ನಯನಮನೋಹರ ದಿವ್ಯ ಮಂಗಳ ಸ್ವರೂಪ. ಜಯನಾರಾಯಣ ರಾಗದ ಒಂದು ಕೃತಿಯಲ್ಲಿ ಸದ್ಗುರು ತ್ಯಾಗ ಬ್ರಹ್ಮರು–

ಪರುಲಕು ಹಿತಮುಗು ಭಾವನಗಾನಿ

ಚೆಡುಪುಮಾರ್ಗಮುಲ ಚಿಂತಿಂಪಲೇನು

–ಎನ್ನುತ್ತಾರೆ. ಅವರು ಲೋಕಹಿತವನ್ನೇ ಚಿನ್ತನ ಮಾಡಿದವರು. ಲೋಕ ಉಪಕಾರಕ್ಕಾಗಿಯೇ ತಮ್ಮ ಬಾಳನ್ನು ಮೀಸಲಾಗಿಟ್ಟವರು, ಈ ಕೀರ್ತನೆಯಲ್ಲಿ–ಅನುಪಲ್ಲವಿಯಲ್ಲಿ ಬರುವ – ಪಾಲುಗಾರುಮೋಮು – ಎಂಬ ತೆಲುಗುಮೂರ್ತಿ, ಕೋಮಲ ಭಾವ ಸೌಂದರ್ಯ ಹಾಗೂ ಲಾಲಿತ್ಯವನ್ನು ಇನ್ನಾವ ಭಾಷೆಯಲ್ಲೂ ತರಲು ಸಾಧ್ಯವಿಲ್ಲ. ಹಾಲು ತುಪ್ಪ ಸೋರುವ ಮುಖ ಎಂಬ ನಾಣ್ನುಡಿ ಕನ್ನಡದಲ್ಲಿದೆ. ಮುದ್ದುಮುಖ, ಸುಂದರ ಮುಖ, ಎಂಬ ಅರ್ಥದಲ್ಲಿ ಈ ಮಾತು ಬಳಸಲಾಗುತ್ತದೆ. ಆದರೆ 'ಪಾಲುಗಾರು ಮೋಮು' ಎಂಬ ಮಾತು – ಲಾವಣ್ಯದಲ್ಲಿ ಇನ್ನೂ ಹತ್ತು ಹೆಜ್ಜೆ ಮುಂದೆ ಹೋದಂತೆ ಭಾಸವಾಗುತ್ತದೆ.

ಬಾಲಾರ್ಕಾಭಸುಚೇಲ, ಮಣಿಮಯ ಮಾಲಾಲಂಕೃತ ಕಂಧರ, ಹಾಗೂ ಸುರುಚಿರ ಕಿರೀಟಧಾರಿಯಾದ, ರಾಮನನ್ನು ಮನೋ ಮಂದಿರದಲ್ಲಿ ಕಾಣುವ ಆಸೆ ತ್ಯಾಗರಾಜರಿಗೆ. ಸುರುಚಿಯಿಂದ ಕಠೋರವಾದ ಮಾತು ಕೇಳಿದ ಧ್ರುವಕುಮಾರ ಶ್ರೀಹರಿಯನ್ನು ಧ್ಯಾನಿಸಿ, ಆ ದಿವ್ಯ ಸುಂದರಾಕಾರವನ್ನು ಕಂಡು ಸುಖಿಸಿದಂತೆ – ತಾನೂ ಸುಖಿಸಬೇಕಂತೆ!! ರಾಮಚಂದ್ರನ ವೃತ್ತಾಂತವನ್ನು ಪವನಪುತ್ರನಮೂಲಕ ಕೇಳಿ ಸೀತಾದೇವಿ ಆನಂದಿಸಿದಂತೆ, ತಾನೂ ಆನಂದಿಸಬೇಕಂತೆ!! ಈ ಮಹದಾನಂದವನ್ನು ಕೃಪೆ ಮಾಡೆಂದು ಬೇಡಿಕೊಳ್ಳುತ್ತ ತ್ಯಾಗರಾಜರು ಪ್ರಾರ್ಥಿಸುತ್ತಾರೆ – ಸುರಭೂಜವಮಾನಿತ ಗುಣಾಂಕ, ಚಿದಾನಂದ, ಖಗತುರಂಗಧೃತರಥಾಂಗ, ಪರಮದಯಾಕರ, ಕರುಣಾರಸ ವರುಣಾಲಯ, ಮುಖಜಿತ ಕುಮುದಹಿತ, ಮೈಥಿಲಿ ನಿನ್ನನ್ನು ಓರೆನೋಟದಿಂದ ನೋಡಿನೋಡಿ ಹಿಗ್ಗುತ್ತಾಳಲ್ಲವೇ ? ಆ ರಸಮಯ ಅನುಭವ ನನಗೂ ಬರುವಂತೆ ಅನುಗ್ರಹಿಸ ಬಾರದೇಕೆ? ಕನಕಾಂಬರಧಾರಿಯಾದ ನಿನ್ನನ್ನು ಕಣ್ತುಂಬ ನೋಡಿ ಧನ್ಯನಾಗುತ್ತೇನೆ.

ಇದು ತ್ಯಾಗಬ್ರಹ್ಮರ ಬಯಕೆಯೆ? ಅಥವ ಆ ಜೀವ ಕಂಡ ದಿವ್ಯಾನುಭೂತಿಯೆ?

### ರಾಗ–ಗೌಳ – ದುಡುಕುಗಲ

ಆರೋಹಣ – ಸರಿಗಮ ರಿಮಪನಿಸ

ಅವರೋಹಣ – ಸನಿಪಮ ಗಮರಿಸ

ಈ ಕೃತಿಯಲ್ಲಿ ನೈಚ್ಯಾನುಸಂಧಾನದ ರಸಪಾಕವಿದೆ ಸಕಲ ದುರ್ಗುಣಗಳುಳ್ಳ, ದುಡುಕು ಸ್ವಭಾವದ ನನ್ನನ್ನು ಯಾರು ತಾನೆ ಕಾಪಾಡುತ್ತಾರೆ? ಎಂದು ತ್ಯಾಗರಾಜ ಸ್ವಾಮಿ ಆತಂಕವನ್ನು ವ್ಯಕ್ತಪಡಿಸುತ್ತಾರೆ. ಮಾನವರು ನಾನಾ ರೀತಿಯಲ್ಲಿ ಅಪರಾಧ ಮಾಡಿದರೂ, ಅಪರಾಧಮಾಡುವವರು ನಾವಲ್ಲ ಬೇರೆಯವರು–ಎಂಬ ಅಭಿಪ್ರಾಯ

**ವಿದ್ವಾನ್ ಬ. ನ. ಗುಂಡೂರಾವ್**

ವನ್ನು ಹೊಂದಿರುತ್ತಾರೆ. ಅವರೆ ಸದ್ಗುರು ತ್ಯಾಗಬ್ರಹ್ಮರು ಸರ್ವಾಪರಾಧವನ್ನು ತಮ್ಮ ಮೇಲೇ ಆರೋಪಿಸಿಕೊಂಡಿದ್ದಾರೆ. ಈ ಕೃತಿ ಪುರಂದರದಾಸರ–ಬಿನ್ನಹಕೆ ಬಾಯಿಲ್ಲವಯ್ಯ ಅನಂತ ಅಪರಾಧ ನನ್ನಲ್ಲಿ ಇರಲಾಗಿ–ಎಂಬ ಮಾತನ್ನು ನೆನಪಿಗೆ ತರುತ್ತದೆ.

ಸಕಲಜೀವಕೋಟಿಗಳಲ್ಲಿ ತಾನೇ ತಾನಾಗಿ ರಮಿಸಿ ವಿಜೃಂಭಿಸುವ ಪರಮಾತ್ಮನನ್ನರಿಯದೆ, ಭೇದ ಭಾವವನ್ನೇ ಬೆಳೆಸಿಕೊಳ್ಳುವುದು, ವ್ರಾಯದಲ್ಲಿ ಕುತರ್ಕಮಾಡುತ್ತ ಭಕ್ತಿಹೀನನಾಗಿ ವರ್ತಿಸುವುದು. ಜನರನ್ನು ಇಂದ್ರಚಂದ್ರ ದೇವೇಂದ್ರರೆಂದು ಹೊಗಳುತ್ತ ಹೊಟ್ಟೆ ಹೊರೆದುಕೊಳ್ಳುವುದು; ತನ್ನನ್ನು ತಾನೇ ಮಹಾಭಕ್ತನೆಂದು ಹೇಳಿಕೊಂಡು ಆಡಂಬರದ ಬಾಳು ಬಾಳುವುದು, ಕಾಣುವ ಪ್ರಪಂಚವನ್ನೇ, ಪ್ರಪಂಚದ ಸಂಬಂಧಗಳನ್ನೇ ಸತ್ಯವೆಂದು ಭಾವಿಸಿ, ಅವ್ಯಾಜ ಕರುಣಾಮೂರ್ತಿಯಾದ ಭಗವಂತನನ್ನು ಮರೆತು ಬಿಡುವುದು, ಮದಾಂಧ ಜನರೊಡನೆ ಸ್ನೇಹ ಬೆಳೆಸಿಕೊಂಡು, ದುರಾಶಾ ಪೀಡಿತನಾಗಿ, ಚಪಲಚಿತ್ತನಾಗಿ, ಮಾಡಬಾರದ ಕಾರ್ಯಗಳನ್ನು ಮಾಡುತ್ತ, ಅನೇಕ ದೌರ್ಬಲ್ಯಗಳಿಗೆ ದಾಸನಾಗಿ, ಉತ್ತಮವಂಶದವನಾದರೂ, ನೀಚಕೃತ್ಯಗಳಲ್ಲಿ ನಿರತನಾಗಿ, ಕೆಲವುದಿನ ಹೆಣ್ಣಿಗಾಗಿ, ಕೆಲವುದಿನ ಮಕ್ಕಳಿಗಾಗಿ, ಕೆಲವುದಿನ ಹಣಕ್ಕಾಗಿ ಬಾಯಿಬಿಟ್ಟು ಹಾತೊರೆಯುತ್ತ, ಬಾಳುವ ಕ್ಷುದ್ರಜೀವಿ, ನಾನಾ ರೀತಿಯ ಹಿಂಸೆಪಡುತ್ತಿದ್ದರೂ ಸಹ, ಗರ್ವದಿಂದ ಬೀಗಿ ಮೆರೆಯುತ್ತಾನೆ. ಈ ದುಡುಕುಸ್ವಭಾವದ ಜೀವಿಯನ್ನು ಕಾಪಾಡುವ ಕರುಣಾಳು ಯಾರು?

ಇದು ಈ ಕೃತಿಯ ಸಾರಾಂಶ, ಪ್ರತಿ ಜೀವಿಗೂ ಅನ್ವಯವಾಗುವಂತಹ ಅಭಿಪ್ರಾಯ, ಎಲ್ಲರೂ ತಂತಮ್ಮ ಸ್ವಭಾವಗಳನ್ನು ನೋಡಿಕೊಳ್ಳಬಹುದಾದ ಕನ್ನಡಿಯಂತಿದೆ ಈ ಕೃತಿ. ಸದ್ಗುರು ತ್ಯಾಗರಾಜಸ್ವಾಮಿಯ ಈ ಕೃತಿಯನ್ನು ಅನುಭವಿಸಿ ಹಾಡುವ ಯಾವ ಕಲಾವಿದನಿಗಾದರೂ ಕಣ್ಣೀರು ಬರದೆ ಇರಲು ಸಾಧ್ಯವಿಲ್ಲ.

ರಾಗ – ಆರಭಿ – ಸಾಧಿಂಚೆನೆ

ಆರೋಹಣ – ಸರಿಮ ಪದಸ

ಅವರೋಹಣ – ಸನಿದ ಪ ಮಗ ರಿಸ

ಸಂದರ್ಭಾನುಸಾರವಾಗಿ ವರ್ತಿಸುವ, ಸಮಯಾನುಸಾರವಾಗಿ ಮಾತಾಡುವ ಚಿತ್ರ ಚತುರನಾದ ಭಗವಂತನ ವಿವಿಧ ರೂಪಗಳು ಈ ಕೃತಿಯ ವಸ್ತು. ವಾಗ್ಗೇಯಕಾರ ಶಿರೋಮಣಿ ತನ್ನ ಆರಾಧ್ಯದೇವನನ್ನು – ಸಂಗೀತ ಸಾಂಪ್ರದಾಯಕ – ಎಂದು ಕರೆದಿದ್ದಾನೆ. ಕೃಷ್ಣ ಗೋಪಕನ್ಯೆಯರೊಡನೆ ಚೆಲ್ಲಾಟವಾಡಿ ಬಂದಿದ್ದಾನೆ. ಅವನ ಹಾವಳಿ ತಾಳಲಾರದೆ ತಾಯಿ ಯಶೋದೆಗೆ ದೂರು ಹೇಳಲು ಅವರೆಲ್ಲ ಗುಂಪು ಕಟ್ಟಿಕೊಂಡು ಬಂದಿದ್ದಾರೆ. ಕೃಷ್ಣ ಏನೂ ಅರಿಯದವನಂತೆ, ತಾಯಿಯ ಮಡಿಲಲ್ಲಿ ಕೂತಿದ್ದಾನೆ. ಅವರಿವರ ಮಾತು ಕೇಳದೆ, ನಂಬದೆ, ಯಶೋದೆ ಬಾಲಮುಕುಂದನನ್ನು ಮುದ್ದಿಸುತ್ತಾಳೆ – ಕೃಷ್ಣ ನಗುತ್ತಿದ್ದಾನೆ, ಆ ನಗುವಿಗೇನರ್ಥವೋ!! ಯಶೋದೆಯ ಮುಗ್ಧ ಸ್ವಭಾವ ಕಂಡು ನಕ್ಕನೋ!! ಅಥವ ನೀನು ಹೇಳಿದ ದೂರೆಲ್ಲ ಏನಾಯ್ತು–ಎಂಬಂತೆ ಗೋಪಕನ್ಯೆಯರನ್ನು ನೋಡಿನಕ್ಕನೋ!! ಚಿತ್ರಚರಿತನಾದ ಸ್ವಾಮಿ ಸಮಯೋಚಿತವಾಗಿ ಮಾತಾಡುತ್ತಾನೆ. ಹರೇರಾಮಚಂದ್ರ, ರಘುಕುಲೇಶ, ಎಂದೆಲ್ಲ ಕೂಗಿ ದರ್ಶನ ನೀಡೆಂದು ಬೇಡುತ್ತಿದ್ದರೂ, ಅಂತರಂಗದಲ್ಲಿ ಮರೆಯಾಗಿನಿಂತು ಸಮಯೋಚಿತವಾಗಿ, ಏನೇನೋ ಉಪಶಮನದ ಮಾತುಗಳನ್ನು ಹೇಳುತ್ತಾನೆ. ಸ್ವಪ್ರಕಾಶನೂ, ಸಜ್ಜನಮಾನಸ ನಿಕೇತನನೂ, ಕನಕಾಂಬರಧರನೂ, ಲಸನ್ಮಕುಟಕುಂಡಲ ವಿರಾಜಿತನೂ ಆದ ರಾಮಚಂದ್ರ ತ್ಯಾಗರಾಜರಿಗೆ ಹೇಳಿದನಂತೆ–ಅಲುಗವದ್ದು – ಕೋಪಮಾಡಿಕೊಳ್ಳಬೇಡ, ವಿಮುಖಲತೋ ಚೇರಬೋಕು– ಭಗವದ್ವಿರೋಧಿಗಳೊಡನೆ ಸೇರಬೇಡ, ವ್ಯಥ ಕಲಿಗಿತೆ ತಾಳುಕೊಮ್ಮು–ಸಂಕಟ ಬಂದಾಗ

## ಶ್ರೀ ಕೋದಂಡರಾಮಸ್ವಾಮಿ ದೇವಾಲಯ

### ತಿರುಪತಿ

### ಆರ್ಜಿತ ಕಲ್ಯಾಣೋತ್ಸವ

ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಸ್ವಾಮಿಯ ಕಲ್ಯಾಣೋತ್ಸವವನ್ನು ಆರ್ಜಿತ ಸೇವೆಯನ್ನಾಗಿ ಪ್ರವೇಶಗೊಳಿಸಲಾಗಿದೆ. ಭಕ್ತಾದಿಗಳು ಆರ್ಜಿತ ಕಲ್ಯಾಣೋತ್ಸವ ಶುಲ್ಕ ರೂ 200–00 ಅನ್ನು ಸಲ್ಲಿಸಿ ಈ ಸೇವೆಯಲ್ಲಿ ಭಾಗವಹಿಸಬಹುದು.

ವಿಜಯ ನಗರದರಸರ ಕಾಲದಲ್ಲಿ ಜೀರ್ಣೋದ್ಧಾರವಾಗಿರುವ ಈ ಪವಿತ್ರ ದೇವಾಲಯವು ತಿರುಪತಿ ನಗರದ ಮಧ್ಯೆ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಹತ್ತಿರ ಅಲಿಪಿರಿಗೆ ಹೋಗುವ ಹಾದಿಯಲ್ಲಿ 2 ಫರ್ಲಾಂಗ್ ದೂರದಲ್ಲಿದೆ. ಆಕರ್ಷಕವಾದ ಪ್ರಶಾಂತವಾದ ಸ್ಥಳ.

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕಾಗಿ ವಿನಂತಿ.

**ತಿ.ತಿ.ದೇ.**

### ವೃಕ್ಷೋ ರಕ್ಷತಿ ರಕ್ಷಿತಃ

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ.

ಮರೆಯದಿರಿ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ, ಪೋಷಣೆಗಳೂ ಉಂಟು.

ರಹಿಸಿಕೊ, ಹೀಗೆಲ್ಲ ಹೇಳಿದ್ದು ಹೇಗೆ? ಕೆಂತರಾಕನೆ–ಹತ್ತಿರಬಾರದೆ ದರ್ಶನಕೊಡದೆ ಕಿರೆಯ ಮರೆಯಲ್ಲಿ ನಿಂತೇ ಹೇಳಿದನಂತೆ, ಆತ ಹೇಳಿದಂತೆ ನಡೆದಾಗ ತಾನೆ ದರ್ಶನ ಭಾಗ್ಯ? ಅದಕ್ಕೆ ಇದೆಲ್ಲ ಪೂರ್ವಸಿದ್ಧತೆಗಳು ಕಾನೆ? ಎಷ್ಟು ಸೂಕ್ಷ್ಮವಾಗಿ, ಸಮಯೋಚಿತನಾಗಿ ಮಾತಾಡಿದ್ದಾನೆ ರಾಮಚಂದ್ರ?

ರಾಗ – ನಾಟ – ಜಗದಾನಂದಕಾರಕ

ಆರೋಹಣ – ಸರಿಗಮ ಪದನಿಸ
ಅವರೋಹಣ – ಸನಿಪಮರಿಸ

ಈ ಕೃತಿ ಸಂಸ್ಕೃತಭಾಷೆಯಲ್ಲಿ ರಚಿತವಾಗಿದೆ. ಹತ್ತುಚರಣಗಳಲ್ಲಿರವ ಈ ರಚನೆಯಲ್ಲಿ, ತ್ಯಾಗರಾಜರು ತಮ್ಮ ಆರಾಧ್ಯ ಮೂರ್ತಿ ಶ್ರೀರಾಮಚಂದ್ರನನ್ನು ವಿಶೇಷಣಗಳ ದಿವ್ಯಮಾಲೆಯಿಂದ ಅಲಂಕರಿಸಿರುವಂತೆ ಕಾಣುತ್ತದೆ. ರಾಮ ಕೇವಲ ಜಾನಕೀ ಪ್ರಾಣನಾಯಕನಲ್ಲ, ಜಗದಾನಂದಕಾರಕನೂ ಹೌದು. ಜಗತ್ತೆಲ್ಲ ಆತನ ಆನಂದ. ಚಂದ್ರನನ್ನು ಕುಮುದ ಬಾಂಧವನೆನ್ನುತ್ತಾರೆ, ರಾಮಚಂದ್ರನೂ ಸಹ ಅಮರ ತಾರಕ ನಿಚಯ ಕುಮುದಹಿತ, ಅಷ್ಟೇ ಅಲ್ಲ ಆತ ಖಗ ತುರಂಗ ಪತ್ನವಿ ಹೃದಾಲಯ, ಅಗಣಿತವಾನರಾಧಿಪ ನತಾಂಘ್ರಿಯುಗ, ಸಜ್ಜನ ಮಾನಸಾಬ್ಧಿ ಸುಧಾಕರ, ಇಂದ್ರನೀಲಮಣಿ ಸನ್ನಿಭಾಘನ ಚಂದ್ರಸೂರ್ಯನಯನ, ನಿರ್ವಿಕಾರ, ನಿಗಮಸಾರತರ, ಅಪಾರ ಮಹಿಮಾದ್ಭುತ ಸುಖಿಜನ ಹೃತ್ಸದನ... ಇತ್ಯಾದಿ ವಿಶೇಷಣಗಳಿಂದ ಅಲಂಕರಿಸಿ, ನೋಡಿ, ಹರ್ಷಿಸಿದ್ದಾರೆ. ಈ ಕೃತಿಯಲ್ಲಿ ಬಳಸಲಾಗಿರುವ ಎಲ್ಲ ವಿಶೇಷಣಗಳನ್ನೂ ಸೇರಿಸಿದರೆ, ರಾಮಾಷ್ಟೋತ್ತರ ಶತದಿವ್ಯನಾಮವಾಗುತ್ತದೆ.

ಇನ್ನುಳಿದದ್ದು ಶ್ರೀರಾಗದ ಕೀರ್ತನೆ– "ಎಂದರೋ ಮಹಾನುಭಾವುಲು" ಈ ಪಲ್ಲವಿ ಜನಜೀವನದಲ್ಲಿ ಗಾದೆಯಾಗಿದೆ. ಕರ್ನಾಟಕ ಸಂಗೀತದ ಮೌಳಿಮಣಿಯಂತಿರುವ ಈ ರಚನೆ ತುಂಬುಗಾಂಭೀರ್ಯದಿಂದ ಪ್ರವಹಿಸುವ ತರಂಗಮಂಗಳೆಯಾದ ನಾದಗಂಗೆ – ಭಾವಭಾಗೀರಥಿ. ವಿನಯಸಂಪನ್ನತೆ ಇಲ್ಲಿ ಜೀವಾಳ. ಮಹಾನುಭಾವರು ಬೇಕಾದಷ್ಟು ಜನ ಇದ್ದಾರೆ. ಅವರಿಗೆಲ್ಲ ನಮಸ್ಕಾರ ಎನ್ನುವ ತ್ಯಾಗಬ್ರಹ್ಮರು ಆ ಮಹಾನುಭಾವರು ಯಾರು? ಹೇಗೆ? ಎಂಬುದಕ್ಕೆ ತಾವೇ ವಿವರಣೆಕೊಟ್ಟಿದ್ದಾರೆ. ಪೂರ್ಣಚಂದ್ರನಂತಿರುವ ರಾಮಚಂದ್ರನ ಅಂದ ಚಂದಗಳನ್ನು ತಂತಮ್ಮ ಹೃದಯಾರವಿಂದದಲ್ಲೇ ಕಂಡು ಬ್ರಹ್ಮಾನುಭವಿಗಳಾದವರೆಷ್ಟೋ ಜನ ಮಹಾನುಭಾವರಿದ್ದಾರೆ. ಯೋಗನಿರತರಾಗಿ ಅಂತಃಸ್ಯೂತಚೇತನವನ್ನು ಕಾಣುವವರೆಷ್ಟೋ ಜನ ಮಹಾನುಭಾವರುಂಟು. ಅವರೆಲ್ಲರೂ ಪರಮಾತ್ಮನ ಶ್ರೀಚರಣಗಳಿಗೆ ತಮ್ಮನ್ನು ತಾವೇ ಸಮರ್ಪಿಸಿಕೊಂಡ ಪುಣ್ಯಜೀವಿಗಳು. ಸಂಗೀತದ ಏಕಮಾತ್ರಲಕ್ಷ್ಯವೂ, ಗಾನ ವಿದ್ಯೆಯ ಏಕೈಕ ಗುರಿಯು ನಾದಾನುಸಂಧಾನದ ಏಕಮಾತ್ರ ಗಮ್ಯಸ್ಥಾನವೂ ಆದ ಪರಾತ್ಪರ ವಸ್ತುವನ್ನು ವಿವಿಧರಾಗಗಳಲ್ಲಿ ಹಾಡಿ ಕೊಂಡಾಡುವ ನಾದೋಪಾಸಕರೆಷ್ಟೋಮಂದಿ ಮಹಾನುಭಾವರಿದ್ದಾರೆ. ಜಗತ್ತನ್ನು ತಮ್ಮ ಕರುಣೆಯಕಂದನಾಗಿ ನೋಡುತ್ತ, ಪರಮಾತ್ಮನ ಕಲ್ಯಾಣಗುಣಗಳೆಂಬ ಮಣಿಮಾಣಿಕ್ಯದಾಭರಣಗಳನ್ನು ತೊಟ್ಟು ಅನುಭವಿಸಿ ಆನಂದಿಸುವ ಮಹಾನುಭಾವರು, ಪರಮಭಾಗವತೋತ್ತಮರಾದ ಪ್ರಹ್ಲಾದ ನಾರದಾದಿ ಪರಮಪಾವನ ವ್ಯಕ್ತಿಗಳು. ಪೂಜ್ಯವೂ ಪುಣ್ಯತಮವೂ ಆದ ಗ್ರಂಥಗಳ ಅಧ್ಯಯನಾನಂದ ಪಡೆಯುವ ಮಹಾನುಭಾವರು... ಹೀಗೆ ಎಲ್ಲರಿಗೂ ವಂದಿಸುವ ವಿನಯ ಈ ಕೃತಿಯಲ್ಲಿದೆ. ಮಹಾನುಭಾವರೆಂದರೆ ಯಾರೆಂಬುದರ ಸೂಕ್ತ, ವಿಶದ, ಶಾಸ್ತ್ರಸಮ್ಮತ ಸಜ್ಜನ ಸಮ್ಮತ ವಿವರಣೆ ಈ ರಚನೆಯಲ್ಲಿದೆ.

ಪಂಚರತ್ನ ಕೃತಿಗಳ ಸಾಹಿತ್ಯ ಸೌಂದರ್ಯವನ್ನು ಕುರಿತು ಎಷ್ಟು ಬರೆದರೂ ಸ್ವಲ್ಪವೇ. ಈ ಕೀರ್ತನೆಗಳನ್ನು, ತದಂತರ್ಗತವಾದ ಭಾವಸೌಂದರ್ಯವನ್ನು ಅನುಭವಿಸಿ ಹಾಡುವಾಗ–ಹಿಂದು ದಿವ್ಯಲೋಕವನ್ನೇ ಸೃಷ್ಟಿಸಬಹುದು. ಗಾಯಕನು ಅನುಭವಿಸಿ ಹಾಡಿದಾಗಲೇ ಕೇಳುವವರಿಗೆ ಆನಂದವನ್ನೀಯಬಲ್ಲ. ಭಾವರಹಿತ ಗಾಯನ – ಅದೆಷ್ಟೇ ಶಾಸ್ತ್ರ ಸಮ್ಮತವಾಗಿರಲಿ–ಪರಿಣಾಮ ಬೀರಲಾರದು. ಭಾವಭಕ್ತಿಗಳೆರಡೂ ಸಮ್ಮಿಳಿತವಾದಾಗ ಅದು ಕೇವಲ ಸಂಗೀತವಲ್ಲ ದಿವ್ಯ ಭವ್ಯ ಅಲೌಕಿಕ ರಸಾನುಭವವಾಗಿರುತ್ತದೆ. ಇದು ಸಂಗೀತದ ಗುಟ್ಟು.

ಸಂಗೀತ ಕನಕರಥ. ಸಾಹಿತ್ಯ ಅದರಲ್ಲಿ ವಿರಾಜಿಸುವ ದೇವ ಪ್ರತಿಮೆ. ಪಂಚರತ್ನ ಕೃತಿಗಳಲ್ಲಡಗಿರುವ–ಭಾವಸೌಂದರ್ಯಮೂರ್ತಿಗಳನ್ನು, ಸಂಗೀತವೆಂಬ ಕನಕರಥದಲ್ಲಿ ಕೂಡಿಸಿ ರಸಯಾತ್ರೆಯಲ್ಲಿ ಕೊಂಡೊಯ್ದಾಗ ಆಗುವ ಆನಂದ ಅನಿರ್ವಚನೀಯ. ವಿದುಲಕು ಮ್ರೊಕ್ಕೆದ ಸಂಗೀತ ಕೋವಿದುಲಕು ಮ್ರೊಕ್ಕೆದ– ಎಂಬ ಮಾತನ್ನು ಸದ್ಗುರು ತ್ಯಾಗರಾಜರು ಆಡಿರುವುದು - ಬಹುಶಃ ಭಾವಜ್ಞರಾಗಿ, ಸಾಹಿತ್ಯಪೋಷಣೆ ಮಾಡಿ ಹಾಡುವ ಸಂಗೀತಗಾರರ ಬಗ್ಗೆ ಇರಬಹುದು.

ನಿರುಪೇದಕಬ್ಬಿನ ನಿಧಿ ರೀತಿ ದೊರಕಿತಿವಿ
ಪರ ತ್ಯಾಗರಾಜುನಿ ವರದ ಮ್ರೊಕ್ಕೆದರಾ

ಎಂಬ ಮಾತಿದೆ. ಶಂಕರಾಭರಣರಾಗದ ಒಂದು ಕೃತಿಯಲ್ಲಿ. ಈ ಕೃತಿಯ ಪಲ್ಲವಿ ಏನು ಗೊತ್ತೇ?—

ನಾ. ಪಾಲಿ ಶ್ರೀರಾಮ
ಭೂಪಾಲಕ ಸೋಮ
ಕಾಪಾಡ ಸಮಯಮು।
ನೀ ಪಾಪಮುಲೀರ
ಶ್ರೀ ಪಾದಮು ಲೀರ ॥

ಈ ಕೀರ್ತನೆ ಹಾಡುವಾಗ ದಿವಂಗತ ಪಟ್ನಂ ಸುಬ್ರಹ್ಮಣ್ಯ ಅಯ್ಯರ್ ಮೇಲ್ಕಂಡ ಅಂಕಿತ ಬರುವ ಚರಣವನ್ನು ಎಂದೂ ಸಂಪೂರ್ಣವಾಗಿ ಹಾಡುತ್ತಿರಲಿಲ್ಲವಂತೆ. ಕಾರಣವೇನು? ಅವರಿಗೆ ಕಂಠ ಬಿಗಿದು ಬರುತ್ತಿತ್ತು. ಕಂಬನಿ ಸುರಿಯುತ್ತಿತ್ತು. ಭಾವ ಪರವಶರಾಗುತ್ತಿದ್ದರು ಎಂದು ಹೇಳಿದ್ದಾರೆ, ಅವರ ಪರಮಾಪ್ತಶಿಷ್ಯರಾದ ಸಂಗೀತರತ್ನ ಶ್ರೀ ಮೈಸೂರು ವಾಸುದೇವಾಚಾರ್ಯರು.

ಸದ್ಗುರು ತ್ಯಾಗಬ್ರಹ್ಮರ ಕೀರ್ತಿಯ ಪಂಚಮಹಾಕಳಶಗಳು ಪಂಚರತ್ನ ಕೃತಿಗಳು. ಆತ್ಮ ಸಮರ್ಪಣಭಾವ, ವಿನಯ, ಆರ್ದ್ರತೆ ಇವುಗಳಿಂದ ತುಂಬಿ ತುಳುಕುತ್ತಿರುವ ಈ ಕೀರ್ತನೆಗಳನ್ನು ತ್ಯಾಗಬ್ರಹ್ಮರ ಆರಾಧನಾ ಸಮಯದಲ್ಲಿ ಸಾಮೂಹಿಕವಾಗಿ ಹಾಡುವ ಸಂಪ್ರದಾಯವಿದೆ. ಆಗ ಗೋಷ್ಠಿಯ ಕಲಾವಿದರು ಸನ್ನಿವೇಶದ ಮಹತ್ವದಿಂದಾಗಿ ಭಾವಪುಲಕಿತರಾಗಿ ಹಾಡುತ್ತಾರೆ. ತ್ಯಾಗಬ್ರಹ್ಮರ ಅಮೂಲ್ಯ ಸೃಷ್ಟಿಯಾದ ಈ ಕೀರ್ತನೆಗಳ ದಿವ್ಯ ಸೌಂದರ್ಯವನ್ನನುಭವಿಸುವಂತಹ ರಸಾರ್ದ್ರಹೃದಯ ಸಂಪನ್ನತೆ ನಮ್ಮಲ್ಲಿ ಬೆಳೆದಾಗ, ಬಿಲಹರಿ ರಾಗದಲ್ಲಿ ಅವರೇ ರಚಿಸಿರುವ ಒಂದು ಕೀರ್ತನೆ ನೆನಪಿಗೆ ಬರುತ್ತದೆ—

ಇಂತಕನ್ನ ಆನಂದಮೇಮಿ?



# ಸಂಕ್ರಾಂತಿಯ ಪುಣ್ಯಕಾಲ

ಬಂದಿತು ಬಂದಿತು ಸಂಕ್ರಾಂತಿ
ತಂದಿತು ತಂದಿತು ಸುಖಶಾಂತಿ

ಎಂಬ ಕವಿವಾಣಿಯಂತೆ ಸಂಕ್ರಾಂತಿ ಬಂತೆಂದರೆ ಜನರಲ್ಲಿ ನವೋತ್ಸಾಹ ಚಿಮ್ಮುತ್ತದೆ. ಈವರೆಗಿನ ದಕ್ಷಿಣಾಯನದಲ್ಲಿ ಬರುವ ಮಳೆಗಾಲದ ಮಳೆ, ಚಳಿಗಾಲದ ಚಳಿ-ಗಾಳಿಯ ಕೊರೆತದಿಂದ ಬರಡಾದ ಜೀವಕ್ಕೆ ಕೊರಡಾದ ಗಿಡ – ಬಳ್ಳಿಗಳಿಗೆ ಇಂದಿನಿಂದ ನವಚೇತನ ತುಂಬುತ್ತದೆ. ವಸಂತದ ಸ್ವಾಗತಕ್ಕೆ ಸಿದ್ಧತೆ ನಡೆಯುತ್ತದೆ. ಉತ್ತರಾಯಣದ ಹಿತಕರವಾದ ವಾಯುಗುಣ, ಪ್ರಕೃತಿಯ ವಿಕಾಸ-ವಿಲಾಸ, ಸುಗ್ಗಿಯ ಹಿಗ್ಗು, ಆರೋಗ್ಯ ಭಾಗ್ಯ, ಧನಸ – ಧಾನ್ಯಗಳು ತುಂಬಿರುವಿಕೆ ಇದನ್ನು ಪುಣ್ಯಕಾಲವನ್ನಾಗಿಸಿದೆ.

## ಸಂಕ್ರಾಂತಿ ಎಂದರೇನು?

ಜಗಚ್ಚಕ್ಷುವಾದ ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಯನ್ನು ಪ್ರವೇಶಿಸುವ ಸಂಧಿಕಾಲಕ್ಕೆ 'ಸಂಕ್ರಾಂತಿ' ಅಥವಾ ಸಂಕ್ರಮಣ' ಎಂದು ಹೆಸರು. ಸೌರಮಾನದ ಪ್ರಕಾರ ಸೂರ್ಯನು ಮೇಷಾದಿ ಹನ್ನೆರಡು ರಾಶಿಗಳನ್ನು ಪ್ರವೇಶಿಸುವಾಗಲೂ "ಸಂಕ್ರಾಂತಿ" ಬರುತ್ತದೆ. ಆದರೆ ಅವುಗಳಲ್ಲಿ 'ಕರ್ಕಾಟಕ ಸಂಕ್ರಾಂತಿ' ಹಾಗೂ ಮಕರ-ಸಂಕ್ರಾಂತಿಗಳು 'ದಕ್ಷಿಣಾಯನ' ಉತ್ತರಾಯಣ ಗಳ ಪ್ರಾರಂಭದ ದಿನಗಳಾದ್ದರಿಂದ ವಿಶೇಷ ಮಹತ್ತ್ವವುಳ್ಳವುಗಳಾಗಿವೆ.

ಸಂಕ್ರಾಂತಿ ಒಂದು ವಿಧದಲ್ಲಿ ಸೂರ್ಯಾರಾಧನೆ. "ಸೂರ್ಯ ಆತ್ಮಾ ಜಗತಃ ಚಕ್ಷುಷಶ್ಚ". ಸೂರ್ಯದೇವ ವಿಶ್ವದ ಆತ್ಮ, ಜಗತ್ತಿನ ಕಣ್ಣು. ಮಳೆ ಬೀಳಲು, ಬೆಳೆ ಬೆಳೆಯಲು, ಇಳೆ ಬೆಳಗಲು ಸೂರ್ಯನೇ ಕಾರಣ. ಆ ಸವಿತೃದೇವನ ದಿವ್ಯ ತೇಜಸ್ಸು ನಮಗೆ ಸಿದ್ಧಿ-ಬುದ್ಧಿಗಳನ್ನು ನೀಡಬಲ್ಲುದು. ಕೇವಲ ಹಿಂದುಗಳಷ್ಟೇ ಅಲ್ಲ ಮಹಮ್ಮದೀಯ ದೊರೆಯಾದ ಅಕ್ಬರ್ ಬಾದಶಹನು ಕೂಡ ಸೂರ್ಯದೇವನ ಮಹಿಮೆಯನ್ನರಿತು "ತನ್ನ ರಾಜ್ಯದಲ್ಲಿ ಪ್ರಜೆಗಳು ದಿನಕ್ಕೆ ನಾಲ್ಕುಸಲ ಸೂರ್ಯನನ್ನು ಪ್ರಾರ್ಥಿಸಬೇಕೆಂದು ಆಜ್ಞೆ ವಿಧಿಸಿದ್ದನು".

## ಉತ್ತರಾಯಣ ಪುಣ್ಯಕಾಲ

ಸಾಮಾನ್ಯವಾಗಿ ಪುಷ್ಯ ಮಾಸದಲ್ಲಿ ಬರುವ (ಜನವರಿ 14 ಅಥವಾ 15 ರಂದು) ಮಕರ ಸಂಕ್ರಾಂತಿಯನ್ನು ಉತ್ತರಾಯಣ ಪುಣ್ಯಕಾಲವೆಂದು ಕರೆಯುತ್ತಾರೆ. ಕೇವಲ ಬದುಕುವುದಕ್ಕೆ ಮಾತ್ರವಲ್ಲ, ಸಾಯುವುದಕ್ಕೂ ಉತ್ತರಾಯಣ ಪುಣ್ಯಕಾಲ. ಶರಶಯ್ಯೆಯಲ್ಲಿ ಮಲಗಿದ ಭೀಷ್ಮ ಪ್ರಾಣ ಬಿಡಲು ಉತ್ತರಾಯಣ ಪುಣ್ಯಕಾಲಕ್ಕಾಗಿ ಹರಿಸ್ಮರಣೆ ಮಾಡುತ್ತಾ ಕಾಯುತ್ತಿದ್ದನೆಂದು ಮಹಾಭಾರತದಲ್ಲಿ ಹೇಳಿದೆ. ಈ ಪುಣ್ಯ ಮುಹೂರ್ತದಲ್ಲಿ ಗಂಗಾ – ತುಂಗಾ – ಕೃಷ್ಣಾ-ಕಾವೇರಿ ಮುಂತಾದ ಪುಣ್ಯ ತೀರ್ಥಗಳಲ್ಲಿ ಲಕ್ಷಾಂತರ ಆಸ್ತಿಕ ಜನರು ತೀರ್ಥಸ್ನಾನ (ಕುಂಭಮೇಳ) ಮಾಡುತ್ತಾರೆ. ದಕ್ಷಿಣಾಯನದಲ್ಲಿ ಮುಚ್ಚಿದ ಸ್ವರ್ಗದ ಬಾಗಿಲನ್ನು ಈ ದಿನ ತೆರೆಯುತ್ತಾರಂತೆ. ಅಲ್ಲದೆ ಉತ್ತರಾಯಣವನ್ನು ದೇವತೆಗಳ ಕಾಲವೆಂದೂ, ದಕ್ಷಿಣಾಯನವನ್ನು ಪಿತೃಗಳ ಕಾಲವೆಂದೂ, ಭಾವಿಸಲಾಗಿದೆ. ಆದ್ದರಿಂದ ಯಜ್ಞ-ಯಾಗಾದಿಗಳಿಗೆ, ಸಮಸ್ತ ದೇವತಾ ಕಾರ್ಯಗಳಿಗೆ ಉತ್ತರಾಯಣ ಪುಣ್ಯಕಾಲ.

## ಭೌಗೋಳಿಕ ಮಹತ್ತ್ವ

ಆಯನ ಎಂದರೆ ಚಲಿಸುವುದು– ಮಾರ್ಗ ಎಂದರ್ಥ. ಈ ವರೆಗೆ ದಕ್ಷಿಣದತ್ತ ವಾಲಿ ಚಲಿಸುವ ಸೂರ್ಯ ಮಕರ ಸಂಕ್ರಮಣದಿಂದ ತನ್ನ ಮಾರ್ಗ ಬದಲಾಯಿಸಿ ಉತ್ತರದ ಕಡೆ ವಾಲುತ್ತಾನೆ. ಸೂರ್ಯ ಮೇಲೆ-ಮೇಲೆ ಬಂದು ರಾತ್ರಿ ಕುಗ್ಗಿ-ಹಗಲು ಹಿಗ್ಗಿದಂತೆ ನಮ್ಮ ಬಾಳಿನಲ್ಲೂ ಕಾವು ಹೆಚ್ಚುತ್ತದೆ. ಇಂದಿನಿಂದ ದೇವತೆಗಳಿಗೆ ಹಗಲು ರಾಕ್ಷಸರಿಗೆ ರಾತ್ರಿ ಆರಂಭವೆಂದು ಪುರಾಣಗಳು ಹೇಳುತ್ತದೆ. ಈ ಆನಂದಕ್ಕಾಗಿ ಎಳ್ಳೆಣ್ಣೆ ಹಚ್ಚಿ ಸ್ನಾನ ಮಾಡಿ ಹೊಸ ವಸ್ತ್ರಧರಿಸಿ, ಪಕ್ವಾನ್ನ ಸವಿದು ಸಂತೋಷಿಸುತ್ತಾರೆ.

ಆಚರಣೆಯ ವಿಧಾನ :–ಈ ಮಕರ ಸಂಕ್ರಾಂತಿ ಹಬ್ಬವನ್ನು ಕರ್ನಾಟಕದಲ್ಲಿ ಒಂದು ಅಥವಾ ಕೆಲವೆಡೆ ಎರಡು ದಿನ ಆಚರಿಸಿದರೆ, ತಮಿಳುನಾಡು ಆಂಧ್ರ ಪ್ರದೇಶಗಳಲ್ಲಿ ಭೋಗಿ, ಪೊಂಗಲ್ ಎಂಬ ಹೆಸರಿನಿಂದ, 3 ದಿನ ಭಾರೀ ವಿಜೃಂಭಣೆಯಿಂದ ಆಚರಿಸುತ್ತಾರೆ.

(1) ಭೋಗಿ ಪೊಂಗಲ್ :– ಸಂಕ್ರಾಂತಿಯ ಹಿಂದಿನದಿನ 'ಭೋಗಿ ಪೊಂಗಲ್' ಆಚರಿಸುತ್ತಾರೆ. ಅಂದು ಮನೆಯ ಆಪ್ತೇಷ್ಟರೆಲ್ಲಾ ಸೇರಿ ಮೃಷ್ಟಾನ್ನ ಭೋಜನ ಸವಿದು ಸಂತೋಷಿಸುತ್ತಾರೆ.

(2) ಸೂರ್ಯ ಪೊಂಗಲ್ :– ಇದು ಸಂಕ್ರಾಂತಿಯ ದಿನ ನಡೆಯುವ ಹಬ್ಬ. ಎಲ್ಲೆಲ್ಲೂ ಸಂಭ್ರಮವೋ ಸಂಭ್ರಮ. ಈ ದಿನ ಸೂರ್ಯಪೂಜೆಗೆ ವಿಶೇಷ ಪ್ರಾಶಸ್ತ್ಯ. ಪೊಂಗಲ್-ಭಕ್ಷ್ಯ, ಕಬ್ಬಿನ ಜಲ್ಲೆಯನ್ನು ಸೂರ್ಯದೇವನಿಗೆ ನೈವೇದ್ಯ ಮಾಡುತ್ತಾರೆ.

ಕರ್ನಾಟಕದಲ್ಲೂ ಈ ದಿನ ಹೆಣ್ಣು ಮಕ್ಕಳು ಹೊಸವಸ್ತ್ರ ಉಟ್ಟು, ಎಳ್ಳುಬೀರಲು ಹೊರಡು

ವಿದ್ವಾನ್ ವಿ. ಎನ್. ಭಟ್ಟ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ—517501

ತ್ತಾರೆ. ಗಂಡಸರು ಪೂಜೆ–ಪುನಸ್ಕಾರ, ಮಾಡಿ ದೇವಾಲಯ ಸಂದರ್ಶಿಸುತ್ತಾರೆ. ವಿವಾಹಿತ–ಅವಿವಾಹಿತ ಹೆಣ್ಣು ಮಕ್ಕಳು ಎಳ್ಳು–ಸಕ್ಕರೆ, ಇತ್ಯಾದಿಗಳನ್ನು ಆಪ್ತೇಷ್ಟರಿಲ್ಲಾ ಹಂಚಿ ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಎಳ್ಳು ಬೆಲ್ಲ ಸವಿಯೋಣ ಒಳ್ಳೆ ಮಾತನಾಡೋಣ ಎಂದು ಶುಭಾಶಯ ಕೋರುತ್ತಾರೆ.

ಆಂಧ್ರದಲ್ಲಿ ಈ ದಿನ ವಿಶೇಷ ರೀತಿಯಲ್ಲಿ ಶ್ರೀರಾಮನ ಪೂಜೆ ಮಾಡುತ್ತಾರೆ. ಈ ದಿನ ರಾಮನು ರಾವಣನನ್ನು ಕೊಂದು ಸೀತೆಯನ್ನು ತಂದ ದಿನವೆಂದು ಹೇಳುತ್ತಾರೆ. ಅಲ್ಲದೆ ಸ್ವರ್ಗಸ್ಥರಾದ ಪಿತೃಗಳು ಅದೃಶ್ಯರಾಗಿ ಈ ದಿನ ತಮ್ಮ–ತಮ್ಮ ಮನೆಯಂಗಳಕ್ಕೆ ಬರುತ್ತಾರೆಂದೂ ಹೇಳಲಾಗುತ್ತದೆ.

(3) ಮಾಟ್ಟು ಪೊಂಗಲ್ :— ಮಾಡು ಎಂದರೆ ಪಶು ಎಂದರ್ಥ. ಸಂಕ್ರಾಂತಿಯ ಮರುದಿನ ಹಸು, ಎತ್ತು, ಎಮ್ಮೆ, ಕೋಣ, ಮುಂತಾದ ಪಶುಗಳನ್ನು ಅಲಂಕರಿಸಿ ಪೂಜಿಸಿ ತಿಂಡಿ–ತಿನಿಸು ನೀಡುತ್ತಾರೆ. ಕೆಲವೆಡೆ ಎತ್ತು ಕಾಳಗ, ಕೋಣ–ಕಾಳಗ ನಡೆಸಿ ವಿನೋದೋತ್ಸವ ಆಚರಿಸುತ್ತಾರೆ. ಕೊಬ್ಬಿದ ಹಾಯುವ ಗೂಳಿಯ ಕೋಡಿಗೆ ದುಡ್ಡಿನ ಚೀಲವನ್ನೋ, ಬೆಳ್ಳಿಯ ಆಭರಣವನ್ನೋ ಹಾಕಿ ಜನ ಸಮೂಹದಲ್ಲಿ ನುಗ್ಗಿಸುತ್ತಾರೆ. ಧೈರ್ಯವುಳ್ಳ ಯಾವದೋ ಒಬ್ಬ ಯುವಕ ಆ ಗೂಳಿಯನ್ನು ತಡೆದು ಹಣ,ಆಭರಣ ಬಿಚ್ಚಿಕೊಂಡು ತನ್ನದಾಗಿಸಿಕೊಳ್ಳುತ್ತಾನೆ. ಹೊಸದಾಗಿ ಬಂದ ಅಕ್ಕಿ ಧಾನ್ಯಗಳಿಂದ ಸಾಮೂಹಿಕ ಭೋಜನ ಏರ್ಪಡಿಸಿ ಸಂತೋಷ ಹಂಚಿಕೊಳ್ಳುತ್ತಾರೆ.

## ಶಾಸ್ತ್ರ ದೃಷ್ಟಿಯಲ್ಲಿ ಸಂಕ್ರಾಂತಿ

ನಿರ್ಣಯ ಸಿಂಧುವಿನಲ್ಲಿ ಈ ಹಬ್ಬದ ವಿಚಾರವಾಗಿ ಹೀಗೆ ಹೇಳಿದೆ.

ತಸ್ಯಾಂ ಕೃಷ್ಣ ತಿಲೈ ಸ್ನಾನಂ ಕಾರ್ಯಂ
ಚೋದ್ವರ್ತನಂ ಶುಭೈಃ
ತಿಲಾ ದೇಯಾಶ್ಚ ವಿಪ್ರೇಭ್ಯೋ
ಸರ್ವದೇವೋತ್ತರಾಯಣೇ
ತಿಲ ತೈಲೇನ ದೀಪಾಶ್ಚ ದೇಯಾ ದೇವಗೃಹೇ
ಶುಭಾಃ

ಸಂಕ್ರಾಂತಿಯಂದು ಕಪ್ಪು ಎಳ್ಳಿನೊಂದಿಗೆ ಸ್ನಾನಮಾಡಿ, ಬ್ರಾಹ್ಮಣರಿಗೆ ಎಳ್ಳು ದಾನ ಕೊಡಬೇಕು. ದೇವಾಲಯಗಳಲ್ಲಿ ಎಳ್ಳೆಣ್ಣೆಯ ದೀಪ ಬೆಳಗಬೇಕು”.

ಧರ್ಮಸಿಂಧುವಿನಲ್ಲಿ ಹೀಗೆ ಹೇಳಿದೆ :—

ಸಂಕ್ರಾಂತೌ ಯಾನಿ ದತ್ತಾನಿ
ಹವ್ಯಕವ್ಯಾನಿ ದಾತೃಭಿಃ
ತಾನಿ ನಿತ್ಯಂ ದದಾತ್ಯರ್ಕಃ
ಪುನರ್ಜನ್ಮನಿ ಜನ್ಮನಿ
ತಿಲಾ ದೇಯಾಶ್ಚ ಹೋತವ್ಯಾ
ಭಕ್ಷ್ಯಾಶ್ಚೈವೋತ್ತರಾಯಣೇ

ಉತ್ತರಾಯಣ ಪುಣ್ಯಕಾಲದಂದು ನಾವು ಮಾಡಿದ ದಾನ–ಮಾನಗಳು ಜನ್ಮ–ಜನ್ಮದಲ್ಲೂ ಸದಾ ನಮಗೆ ಸಿಗುವಂತೆ ಸೂರ್ಯನು ಅನುಗ್ರಹಿಸುತ್ತಾನೆ. ಈ ಶುಭದಿನ ತಿಲದಾನ, ತಿಲಹೋಮ, ತಿಲಭಕ್ಷಣಗಳಿಗೆ ವಿಶೇಷ ಪ್ರಾಶಸ್ತ್ಯವಿದೆ.

ಹೀಗೆ ಈ ಹಬ್ಬಕ್ಕೂ ಎಳ್ಳಿಗೂ ನಿಕಟ ಸಂಬಂಧವಿದೆ. ಎಳ್ಳು–ಚಿಗಳಿ ಸಂಕ್ರಾಂತಿ ಎಳ್ಳು, ಎಳ್ಳು ಬೀಸಿ ಬೆಲ್ಲ ಹಾಕಿ ಮಾಡಿದ ಎಳ್ಳು ನೀರು–ಅಪ್ಯಾಯಮಾನವಾಗಿರುತ್ತದೆ. ಶೀತ–ವಾತ ಜನ್ಯವಾದ ಜಡ್ಡು-ಆಲಸ್ಯಗಳನ್ನು ದೂರ ಮಾಡುವಂತ ಸ್ನೇಹ ದ್ರವ್ಯಗಳ ಹಂಚಿಕೆ, ಸೇವನೆ, ದಾನ–ಮಾನ ಈ ಹಬ್ಬದ ವೈಶಿಷ್ಟ್ಯ. ಯುಗಾದಿಯಂದು ಬೇವು–ಬೆಲ್ಲ ಹಂಚುವಂತೆ ಇಲ್ಲಿ ಎಳ್ಳು–ಬೆಲ್ಲ ಹಂಚುವುದು ಮನಸ್ಸಿನ ಕಹಿ ಭಾವನೆ ಮರೆತು ಸಿಹಿ ಭಾವ ತುಂಬಿ ಅಮೃತಪುತ್ರರಾಗೋಣ — ಎಂಬುದರ ದ್ಯೋತಕವಾಗಿದೆ. ಗಣೇಶ ಚತುರ್ಥಿ, ದೀಪಾವಳಿಗಳಂತು ಕಂಡು ಬರುವ ಬಾಹ್ಯಾಡಂಬರ ಬಾಣ — ಬಿರುಸುಗಳೇ ಮುಂತಾದ ಖರ್ಚು–ವೆಚ್ಚಗಳು ಇಲ್ಲದಿರುವುದು ಈ ಹಬ್ಬದ ಅಗ್ಗಳಿಕೆಯೆನ್ನಬಹುದು.



# ಪುಸ್ತಕ ವಿಮರ್ಶೆ

## ಜನಪ್ರಿಯ
# ಬೋಧಪ್ರದ ಉದ್ಗ್ರಂಥ

ಗಾಯತ್ರ್ಯನುಷ್ಠಾನ ಸಾರಸಂಗ್ರಹ. ಸಂಗ್ರಾಹಕ ಮತ್ತು ಗ್ರಂಥಕರ್ತರು:- ಬಿ. ಭೀಮಸೇನಶರ್ಮ; ಪ್ರಕಾಶಕರು: ಎಸ್. ಸುಬ್ರಹ್ಮಣ್ಯ ಐಯ್ಯರ್; 111/49, ಎಲ್.ಐ.ಸಿ. ಕಾಲೋನಿ, 3ನೆ ಬ್ಲಾಕ್, ಜಯನಗರ, ಬೆಂಗಳೂರು-11. ಪು. 287 ಮೂರನೆ ಮುದ್ರಣ - 1987, ಬೆಲೆ: ರೂ. 15/-

ವೈದಿಕ ಧರ್ಮದಲ್ಲಿ ಗಾಯತ್ರೀ ಮಂತ್ರಕ್ಕೆ ಅಪೂರ್ವವೂ ಅದ್ಭುತವೂ ಆದ ಮಹತ್ವವನ್ನು ಶ್ರುತಿ-ಸ್ಮೃತಿ-ಪುರಾಣ-ಇತಿಹಾಸಾದಿಗಳಲ್ಲಿ ಕಂಡ ಸಾವಿರಾರು ತಲೆಮಾರುಗಳ ಜನರು ಅದರ ಉಪದೇಶ-ಉಪಾಸನೆಗಳನ್ನು ಇಂದಿನವರೆಗೂ ಬಳಕೆಯಲ್ಲಿ ಉಳಿಸಿಕೊಂಡಿರುವುದು ಸರಿಯಷ್ಟೆ. ಆದರೆ ಇಂದಿನ ಯಾಂತ್ರಿಕ ವ್ಯಾವಹಾರಿಕ ಜೀವನದ ಒತ್ತಡಗಳಲ್ಲಿ ಅದರ ಮರ್ಮವನ್ನೂ ಮಹಿಮೆಯನ್ನೂ ಆಮೂಲಾಗ್ರವಾಗಿ ಅರಿಯುವುದಕ್ಕೆ ಯಾವದೇ ಒಂದು ಆಧಾರಗ್ರಂಥ ಸುಲಭವಾಗಿ ದೊರೆಯುತ್ತಿಲ್ಲ. ಸಂಸ್ಕೃತ ವಿದ್ವಾಂಸರು ಕಷ್ಟದಿಂದ ಆಕರಗ್ರಂಥಗಳನ್ನು ಒದಗಿಸಿಕೊಟ್ಟರೂ, ಅದರ ಅರ್ಥ ತಾತ್ಪರ್ಯ ಬಹುಜನರ ಪಾಲಿಗೆ ಎಟುಕದಂತಾಗಿದೆ. ಈ ಕೊರತೆಯನ್ನು ಮನಗಂಡು ಇದರ ನಿವಾರಣೆಗಾಗಿ ಭಗೀರಥ ಪ್ರಯತ್ನ ಮಾಡುತ್ತಿರುವ ಭೀಮಸೇನ ಶರ್ಮರ ಸಾಹಸವನ್ನು ಎಷ್ಟು ಹೊಗಳಿದರೂ ಸಾಲದು. 'ಸಂಧ್ಯಾವಂದನೆಯ ರಹಸ್ಯ, ಪೂಜಾಕಲ್ಪಗಳು, ಸ್ತೋತ್ರಪಾಠಗಳು-ಇವೇ ಮುಂತಾದ ಧಾರ್ಮಿಕ ಪ್ರಕಟನೆಗಳಿಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟು ದುಡಿಯುತ್ತಿರುವ ಆಸ್ತಿಕ ಶಿರೋಮಣಿಗಳಲ್ಲಿ ಈ ಗ್ರಂಥಕರ್ತರು ಅವಿಸ್ಮರಣೀಯರು. ನಾನಾ ಆಕರಗ್ರಂಥಗಳಿಂದ ಎಲ್ಲ ಉಪಯುಕ್ತ ಸಾಮಗ್ರಿಯ ಸಂಗ್ರಹಣೆ, ಬಳಿಕ ಅವುಗಳ ಮೂಲಪಾಠದ ಜತೆಜತೆಗೆ ಕನ್ನಡ ಅರ್ಥತಾತ್ಪರ್ಯಗಳ ಸಂಯೋಜನೆ-ಇವು ಈ ಸಂಪಾದಕರ ವೈಶಿಷ್ಟ್ಯ.

ಅನೇಕ ಆಸ್ತಿಕ ವಾಚಕರಿಗೆ ಈ ಗ್ರಂಥವು ಪ್ರಿಯವಾಗಿರುವುದನ್ನು, ಇದು ಇಷ್ಟು ಬೇಗ ಮೂರನೆಯ ಮುದ್ರಣಕ್ಕೆ ಬಂದಿರುವುದೇ ಎತ್ತಿ ತೋರಿಸುತ್ತದೆ. ವಿಶ್ವಾಮಿತ್ರ ಕಲ್ಪ, ಗಾಯತ್ರೀ ಕಲ್ಪ, ವಶಿಷ್ಠ ಕಲ್ಪ ಮುಂತಾದ ಆಕರಗ್ರಂಥಗಳಿಂದ ಆಯ್ದ ಗಾಯತ್ರೀ ಮಂತ್ರದ ಸಕಲ ಅಂಗೋಪಾಂಗಗಳೂ ಈ ಮುದ್ರಣದಲ್ಲಿ ಸೇರ್ಪಡೆಯಾಗಿರುವುದರಿಂದ ಈ ಆವೃತ್ತಿಯ ಪುಟಸಂಖ್ಯೆಯೂ ಬೆಳೆದಿದೆ. ತ್ರಿಕಾಲ ಸಂಧ್ಯಾವಿಧಿಗಳು, ಸ್ನಾನ, ಆಚಮನ, ಪ್ರಾಣಾಯಾಮ, ಮಾರ್ಜನ, ಅರ್ಘ್ಯಪ್ರದಾನ, ಆವಾಹನ, ಜಪ, ಉಪಸ್ಥಾನ-ಮುಂತಾದ ಎಲ್ಲ ಸಂಧ್ಯಾವಂದನದ ಅಂಗಗಳೂ ಇಲ್ಲಿ ಸವಿಸ್ತಾರವಾಗಿ ಸೇರಿಸಲ್ಪಟ್ಟಿವೆ. ಧ್ಯಾನ ಶ್ಲೋಕಗಳು, ಸ್ತೋತ್ರಗಳು, ಬ್ರಹ್ಮಾಸ್ತ್ರ, ಬ್ರಹ್ಮಶೀರ್ಷಾಸ್ತ್ರ, ಬ್ರಹ್ಮದಂಡಾಸ್ತ್ರ ಮುಂತಾದ ದಿವ್ಯಾಸ್ತ್ರಗಳ ಮಂತ್ರಪ್ರಯೋಗ ಮತ್ತು ಉಪಸಂಹಾರಗಳು ಇಲ್ಲಿ ಸಂಯೋಜಿತವಾಗಿದ್ದು ಆಸ್ತಿಕರ ಕೌತುಕವನ್ನು ಕೆರಳಿಸುವಂತಿವೆ.

ಹಿಟ್ಟಿನಲ್ಲಿ ಗಾಯತ್ರಿಯನ್ನು ವೇದಮಾತೆಯೆಂದು ನಂಬಿರುವ ಜನರಿಗೆ ಈ ಬೃಹದ್ಗ್ರಂಥ ಕಾಮಧೇನು ಎನ್ನಬಹುದು. ಗಾಯತ್ರಿಯ ಯಂತ್ರ-ತಂತ್ರ, ವಿಧಿ-ವಿಧಾನ, ಆಗಮ-ಉಪನಿಷತ್ತು, ಜಪ-ತಪ, ಅಧ್ಯಯನ-ಅನುಷ್ಠಾನ, ಪ್ರಯೋಗ-ವಿನಿಯೋಗ ಎಲ್ಲವನ್ನೂ ಸಾರವತ್ತಾಗಿ ಒಳಗೊಂಡಿರುವ ಒಂದು ವಿಶ್ವಕೋಶವೆಂದಾದರೂ ಭಾವಿಸಬಹುದು. ಮಾನ್ಯ ಲೇಖಕರ ಪರಿಶ್ರಮ ಸಾರ್ಥಕವಾಗುವಂತೆ ಹೆಚ್ಚು ಸಂಖ್ಯೆಯ ಗ್ರಾಹಕರು ಈ ಅಲ್ಪಬೆಲೆಯ ಉದ್ಗ್ರಂಥವನ್ನು ಕೊಂಡು, ಅಧ್ಯಯನ ಮಾಡಿ ಶ್ರೇಯೋಭಾಗಿಗಳಾಗಲೆಂದು ಹಾರೈಸುತ್ತೇವೆ. ಮುದ್ರಣ ಕೂಡ ದೋಷಗಳಿಂದ ಮುಕ್ತವಾಗಿದ್ದು ಅಂದವಾಗಿದೆ.

**ಡಾ॥ ಕೆ. ಕೃಷ್ಣಮೂರ್ತಿ**



# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು ಮೂರನೆಯ ಸಾಲೂ ಸೇರಿದಂತೆ : | | |
| ಎ ವಿಭಾಗ– ಗೀಸರ್‌ನೊಂದಿಗೆ | ರೂ | 20–00 |
| ಬಿ ವಿಭಾಗ– ಗೀಸರ್ ರಹಿತ | ರೂ | 12–00 |
| ವಿ.ವಿ.ಸಿ. ಹಾಗೂ ಎಂ.ಬಿ ಸಿ. 31 ಹಾಗೂ 26 | ರೂ | 70–00 |
| ಎಂ.ಬಿ ಸಿ. ಎ–ಭಾಗ ಗೀಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗೀಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗೀಸರ್‌ನೊಂದಿಗೆ | ರೂ | 15–00 |
| ಎ.ಟಿ.ಸಿ. ಸೂಟ್‌ಗಳು ಗೀಸರ್ ರಹಿತ | ರೂ | 10–00 |
| ಎ.ಟಿ ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30–00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್.ಸಿ., ಎ.ಎನ್.ಸಿ., ಜಿ.ಎನ್.ಸಿ , ಎಚ್.ವಿ.ಸಿ. : | | |
| ಎ–ಭಾಗ ಗೀಸರ್ ರಹಿತ | ರೂ | 12–00 |
| ಬಿ–ಭಾಗ " | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) ಗೀಸರ್ ನೊಡನೆ | ರೂ | 25–00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) ಗೀಸರ್‌ರಹಿತ | ರೂ | 12–00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ (ಗೀಸರ್‌ನೊಡನೆ) | ರೂ | 50–00 |
| " " ಸಣ್ಣ ಸೂಟ್ (ಗೀಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| " " ಮೂಲೆ ಸೂಟ್ | ರೂ | 60–00 |
| " " ಇತರೆ | ರೂ | 50–00 |
| ಎಸ್.ಜಿ. ಅತಿಥಿಗೃಹ I ಹಾಗೂ II ಮೂಲೆ ಸೂಟ್ | ರೂ | 60–00 |
| ಇತರೆ | ರೂ | 50–00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ : | | |
| ಮಾಸ್ಟರ್ ಸೂಟ್ ಸಂ. 9 ಹಾಗೂ ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750–00 |
| ಮಾಸ್ಟರ್ ಸೂಟ್ ಸಂ. 1 ಕಿರಿಯ ಸೂಟ್ ಸಂ. 6 " | | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750–00 |
| ಶ್ರೀನಿಕೇತನ (ಪ್ರತಿ ಸೂಟ್), ಎಸ್.ಪಿ. ನಗರ್ ಅತಿಥಿಗೃಹ ನಂ.–IV | ರೂ | 250–00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–00 |
| ಗೋಕುಲಂ (ಎ. ಸಿ.) | ರೂ | 500–00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75–00 |
| ರೂಯಾ 248 | ರೂ | 100–00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜ್ | ರೂ | 125–00 |
| ಎ. ಟಿ. ಸಿ.– 99 | ರೂ | 100–00 |
| ಟಿ. ಬಿ. ಸಿ. 136, 152, 71 | ರೂ | 75–00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು : | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ ಕಾಟೇಜುಗಳು ಅರ್ಧ ಕಾಟೇಜು | ರೂ | 30–00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–00 |
| ರಾಮಬಗೀಚಾ ಅತಿಥಿಗೃಹ " | ರೂ | 50–00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

**ಉಪ ಕಾರ್ಯನಿರ್ವಹಣಾಧಿಕಾರಿ** (ಸ್ವಾಗತ–II)
ತಿ. ತಿ. ದೇವಸ್ಥಾನಗಳು, ತಿರುಮಲೆ.

# ಸಂಸ್ಕೃತ ಸಾಹಿತ್ಯದಲ್ಲಿ ಸಂಗೀತ

ಸಂಸ್ಕೃತ ಸಾಹಿತ್ಯಕ್ಕೆ ಒಂದು ಸಮೃದ್ಧ ಮತ್ತು ವಿಶಾಲವಾದ ಆಯಾಮವಿದೆ. ಈ ಆಯಾಮದೊಳಗೆ ಅನೇಕ ವಿದ್ಯೆಗಳಿವೆ. ಕಾವ್ಯ, ನಾಟಕ, ಇತಿಹಾಸ, ಪುರಾಣ, ಆಖ್ಯಾನ, ಕಥೆ, ಸುಭಾಷಿತ ಮುಂತಾದವು, ಇವೆಲ್ಲವುಗಳಲ್ಲಿ ಸಂಗೀತ ವಿದ್ಯೆಯ ಬಗ್ಗೆ ಉಲ್ಲೇಖ ಮತ್ತು ತಿಳುವಳಿಕೆಗಳು ಕೆಲವೊಮ್ಮೆ ಕಡಿಮೆ ಹಾಗೂ ಹೆಚ್ಚು ಪ್ರಮಾಣದಲ್ಲಿ ಸಿಗುತ್ತವೆ.

ಸಂಗೀತ ವಿದ್ಯೆಗೆ ಪ್ರಾಚೀನ ಹೆಸರೆಂದರೆ– 'ಗಾಂಧರ್ವ' ಇದನ್ನು ಸಾಮವೇದದ ಉಪವೇದವೆಂತಲೂ ಹೇಳಿದ್ದಾರೆ. ಗೀತೆ ಹಾಗೂ ವಾದ್ಯದ ಸಮಾವೇಶ ಗಾಂಧರ್ವದಲ್ಲಿಯೇ ಇತ್ತು, ಆದರೆ ನೃತ್ಯವೂ ಸಹ ಗಾಂಧರ್ವದಲ್ಲಿ ಸೇರಿತ್ತು. ಭಾರತದ ಪರಂಪರೆಯಲ್ಲಿ ಗೀತೆ ಮತ್ತು ವಾದ್ಯ ಪರಸ್ಪರ ಅಭಿನ್ನ ರೀತಿಯಲ್ಲಿ ಸೇರಿವೆ. ಗೀತೆಯ ಮಹತ್ತ್ವ ಸರ್ವೋತ್ತಮವಾಗಿದ್ದರೂ ಸಹ ವಾದ್ಯದ ಮೂಲಕ ಗೀತೆಯ ರಂಜನೆ ಅನಿವಾರ್ಯವಾಗಿದೆ. ಗಾಂಧರ್ವದೊಳಗೆ ಶ್ರುತಿ, ಸ್ವರ, ವರ್ಣ, ಅಲಂಕಾರ, ಗ್ರಾಮ, ಮೂರ್ಛನಾ, ತಾನ, ರಾಗ, ಲಯ, ತಾಳ, ಪ್ರಮಾಣ – ಇತ್ಯಾದಿ ಮೂಲ ತತ್ತ್ವಗಳು ಮತ್ತು ವೀಣೆ, ವೇಣು, ಮೃದಂಗ ಹಾಗೂ ಉಳಿದ ವಾದ್ಯ ಸಾಮಗ್ರಿಗಳು ಬರುತ್ತವೆ. ಸಂಸ್ಕೃತ ಸಾಹಿತ್ಯ ಕೃತಿಗಳಲ್ಲಿ ಈ ತಥ್ಯಗಳ ಉಲ್ಲೇಖ ಸಿಗುತ್ತದೆ.

ಮಹಾಕಾವ್ಯಗಳಲ್ಲಿ ರಾಮಾಯಣದ ಅವಲೋಕನ ಮಾಡಿದರೆ ಎಷ್ಟೋ ಉಲ್ಲೇಖಗಳು ಸಂಗೀತದ ಬಗೆಗೆ ಸಿಗುತ್ತವೆ. ಅಯೋಧ್ಯಾ, ಕಿಷ್ಕಿಂಧ, ಲಂಕಾ ಇತ್ಯಾದಿ ನಗರಗಳು ಸದಾ ಗೀತವಾದ್ಯಗಳ ಮಧುರ ಧ್ವನಿಗಳಿಂದ ನಿನದಿತವಾಗುತ್ತಿರುತ್ತವೆ. ಅಂತಃಪುರಗಳಲ್ಲಿ ಸಂಗೀತ ಮತ್ತು ನೃತ್ಯದ ಮೂಲಕ ಆಮೋದ–ಪ್ರಮೋದದ ವಾತಾವರಣವಾಗುವ ವರ್ಣನೆ ಬರುತ್ತವೆ. ಉತ್ಸವದ ಹಬ್ಬಗಳಲ್ಲಿ ಪರಂಪರೆಗೆ ಅನುಸಾರ ಸಾಮೂಹಿಕವಾಗಿ ಗಾನ, ವಾದನ, ನೃತ್ಯದ ಆನಂದವೇರ್ಪಡಿಸುತ್ತಿದ್ದರು. ರಾಮಾಯಣದ ಗಾನ ಪ್ರಭು ರಾಮಚಂದ್ರರ ಸಮಕ್ಷಮದಲ್ಲಿ ನಡೆಯುವಾಗ, ಲವ ಕುಶರಿಗೆ ವಾಲ್ಮೀಕಿ ಮುನಿಯ ಆದೇಶವಿತ್ತು– ಸುಮಧುರ ತಂತಿಗಳನ್ನು ಬಹು ಸುಂದರವಾಗಿ ಸೇರಿಸಿ ಇಚ್ಛಿತ ಮೂರ್ಛನೆಯನ್ನು ಸ್ಥಾಪಿಸಿ ಮತ್ತೂ ಮಧುರವಾಗಿ ಹಾಡಿ ಸಂತೋಷ ಪಡುತ್ತಿದ್ದರು. ಲವ ಕುಶರ ವರ್ಣನೆ

ತೌತು ಗಾಂಧರ್ವ ತತ್ತ್ವಜ್ಞೌ
ಸ್ಥಾನಮೂರ್ಛಿತಕೋವಿದೌ।

ಶ್ರೀ ರಾ. ನ. ನ. ಮೂರ್ತಿ



ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ

# ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು.

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

ಅದರ ಗಾನ ವರ್ಣನೆ–

ಪಾಠ್ಯೇ ಗೇಯೇಚ ಮಧುರಂ
ಪ್ರಮಾಣೈ ಸ್ತ್ರಿಭಿರನ್ವಿತಂ ।
ಜಾತಿಭಿಃ ಸಪ್ತಭಿರ್ಯುಕ್ತಂ
ತಂತ್ರೀಲಯ ಸಮನ್ವಿತವತ್ ।

ಹೀಗೆ ಮಹಾಭಾರತದಲ್ಲೂ ಗೀತ, ವಾದ್ಯ, ನೃತ್ಯ ಮೂರರ ಪ್ರಯೋಗ; ಪ್ರಾಸಾದ–ಜೀವನ ಹಾಗೂ ಜನ ಜೀವನದ ಸ್ವಾಭಾವಿಕ ಅಂಗವಾಗಿತ್ತು. ವೀಣೆ, ವೇಣು, ಮೃದಂಗ ಮತ್ತು ಬೇರೆ ವಾದ್ಯಗಳ ಬಹಳಷ್ಟು ವರ್ಣನೆಗಳ ಉಲ್ಲೇಖ ಬರುತ್ತದೆ.

ವೇಣುವೀಣಾ ಮೃದಂಗಾನಾಂ
ಮನೋಜ್ಞಾನಾಂ ಚ ಸರ್ವಶಃ ।
ವೀಣೇಯಂ ಮಧುರಾರಾವ
ಗಾಂಧಾರ ಸ್ವರ ಮೂರ್ಛಿತಾ ।

ಅರ್ಜುನನನ್ನು ಗಂಧರ್ವ ವಿಶಾರದ ಎಂದಿದೆ. ವಿಶ್ವಾವಸು ಗಂಧರ್ವನಿಂದ ಅವನು ಗಾಂಧರ್ವದ ಒಳ್ಳೆಯ ಶಿಕ್ಷಣ ಪಡೆದಿದ್ದ. ಪಾಂಡವರ ಅಜ್ಞಾತವಾಸದ ಕಾಲದಲ್ಲಿ ವಿರಾಟ ರಾಜನ ಅಜ್ಞೆಯಿಂದ ರಾಜಪುತ್ರಿ ಉತ್ತರೆಗೆ ಬೃಹನ್ನಳೆ ವೇಷಧಾರಿ ಅರ್ಜುನ ಗಾಂಧರ್ವದ ವಿಧಿವತ್ ಶಿಕ್ಷಣವನ್ನು ಕೊಟ್ಟ.

ಶಿಕ್ಷಯಾಮಾಸ ಚ ಗೀತಂ ವಾದಿತ್ರಂ
ಸುತಾಂ ವಿರಾಟಸ್ಯ ಧನಂಜಯ ಪ್ರಭುಃ

ನಗರಗಳಲ್ಲಿ ಸಂಗೀತ, ನೃತ್ಯದ ಶಿಕ್ಷಣಕ್ಕಾಗಿ ಸಂಗೀತ ಶಾಲೆಗಳ ವ್ಯವಸ್ಥೆ ಇರುವ ಉಲ್ಲೇಖಗಳಿವೆ. ಗಾಯಕ, ವಾದಕ, ನರ್ತಕ, ಕಥಾವಾಚಕ, ಸೂತಮಾಗಧ, ವಂದಿ ಇತರ ಕಲಾಕಾರರಿಗೆ ರಾಜ್ಯದ ವತಿಯಿಂದ ಸಾಕಷ್ಟು ಪ್ರೋತ್ಸಾಹವಿತ್ತು.

ಪುರಾಣ ವಾಙ್ಮಯದಿಂದಲೂ ಕೆಲವು ಉದಾಹರಣೆಗಳನ್ನು ತೆಗೆದು ಕೊಳ್ಳಬಹುದು. ಹರಿವಂಶ ಪುರಾಣದಲ್ಲಿ ನಾರದರನ್ನು ಗಾಂಧರ್ವಕೋವಿದ ಎನ್ನಲಾಗಿದೆ. ತಮ್ಮ ಹೆಸರಾಂತ ವೀಣೆಯನ್ನು ಹೆಗಲಿನಲ್ಲಿ ನೇತು ಹಾಕಿಕೊಂಡು ಅವರು ಹರಿಗುಣ ಕೀರ್ತನೆಯನ್ನು ಮಾಡುತ್ತಿದ್ದರು. ವಲ್ಲಕೀ ವೀಣೆಯಲ್ಲಿ ಸಪ್ತ ಸ್ವರಗಳ ಮೂರ್ಛನೆಯನ್ನು ಸ್ಥಾಪಿಸಿ, ಆರು ಗ್ರಾಮ್ಯ ರಾಗಗಳನ್ನು ಹಾಡಬಹುದೆಂದೂ ಅವರು ತಿಳಿಸಿದ್ದಾರೆ.

ವಲ್ಲಕೀ ವಾದ್ಯ ಮಾನಾಂ ಹಿ
ಸಪ್ತ ಸ್ವರ ವಿಮೂರ್ಛಿತಾವಣ್ ।

ಲೋಕೋತ್ಸವಗಳಲ್ಲಿ ಸಂಗೀತದ ಸಾಮೂಹಿಕ ಪಕ್ಷ ಚಿತ್ರಿತವಾಗಿದೆ. ಇದನ್ನು ಛಾಲಿಕ್ಯ ಎಂದಿದ್ದಾರೆ.

ವಾಯುಪುರಾಣದಲ್ಲಿ ಸ್ವರಮಂಡಲದ ವರ್ಣನೆಯಿದೆ–

ಸಪ್ತಸ್ವರಾಸ್ತ್ರಯೋ ಗ್ರಾಮಾ
ಮೂರ್ಛ ನಾಶ್ವ ಏಕೋನ ವಿಂಶತಿಃ ।
ತಾನಾಶ್ಚೈಕೋನ ಪಂಚಾಶತ್ ॥

ಅಲಂಕಾರ, ಬಹಿರ್ಗತಿ ಇತ್ಯಾದಿಗಳ ವರ್ಣನೆಯೂ ವಾಯು ಪುರಾಣದಲ್ಲಿದೆ. ನಾಗಜಾತಿಯ ಕಂಬಳ ಮತ್ತು ಅಶ್ವತರ ಇಬ್ಬರು ಸಹೋದರರ ವರ್ಣನೆ ಮಾರ್ಕಂಡೇಯ ಪುರಾಣದಲ್ಲಿದೆ. ಇವರು ಆರಾಧಿಸಿ ದೇವಿಯನ್ನು ಸಂತುಷ್ಟಗೊಳಿಸಿದ್ದರು. ದೇವಿಯ ಪ್ರಸಾದದಿಂದ ಇವರ ಮನೋಕಾಮನೆ ಪೂರ್ಣಗೊಂಡಿತು. ಮತ್ತೆ ಇವರಿಗೆ ಗಾಂಧರ್ವ ವಿಧಾನದ ಪರಿಪೂರ್ಣ ಜ್ಞಾನ ಪ್ರಾಪ್ತವಾಯಿತು. ಸಂಗೀತ ವಿದ್ಯೆಯ ಆಚಾರ್ಯರಲ್ಲಿ ಇವರ ವರ್ಣನೆ ಮಾರ್ಕಂಡೇಯ ಪುರಾಣದಲ್ಲಿ ಬರುತ್ತದೆ. ಕೆಲವು ವಿದ್ವಾಂಸರ ಅಭಿಪ್ರಾಯವೆಂದರೆ, ಸರಸ್ವತಿ ಸಾಹಿತ್ಯ ಮತ್ತು ಸಂಗೀತದ ಅಧಿಷ್ಠಾತ್ರಿ ದೇವತೆಯಾದ ಉಲ್ಲೇಖ ಮೊಟ್ಟ ಮೊದಲು ಇದೇ ಪುರಾಣದಲ್ಲಿ ಸಿಗುತ್ತದೆ. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಮಾರ್ಕಂಡೇಯ ಋಷಿ ಮತ್ತು ರಾಜಾ ವಜ್ರರ ನಡುವೆ ಸಂವಾದದ ಮೂಲಕ ಲಲಿತ ಕಲೆಗಳ ಅಂತಃ ಸಂಬಂಧ ತಿಳಿಸಲಾಗಿದೆ. ಇಲ್ಲಿ ಲಲಿತ ಕಲೆಗಳಲ್ಲಿ ಗೀತೆಗೆ ಪ್ರಥಮ ಸ್ಥಾನ ಕೊಡಲ್ಪಟ್ಟಿದೆ, ಮತ್ತೆ ಗಾಂಧರ್ವದ ಸಂಪೂರ್ಣ ವಿವರಣೆ ಇದರಲ್ಲಿ ದೊರಕುತ್ತಿದೆ.

ಸಂಸ್ಕೃತ ನಾಟಕಗಳಲ್ಲಿ ಕೇವಲ ಸಂಗೀತದ ತಿಳುವಳಿಕೆ ಅಷ್ಟೇ ಅಲ್ಲ, ನಾಟ್ಯ ಪ್ರಯೋಗದೊಳಗೆ ಸಂಗೀತದ ಪ್ರತ್ಯಕ್ಷ ಪ್ರಯೋಗ ಹೇಗೆ ಮಾಡುತ್ತಿದ್ದರೆಂಬುದರ ಪ್ರಮಾಣವೂ ಸಿಗುತ್ತದೆ. ನಾಟ್ಯದಲ್ಲಿ ರಸಭಾವದ ಪರಿಪೋಷಣೆ ಮತ್ತು ಚಿತ್ತ ಪ್ರಸಾದನಕ್ಕಾಗಿ ಸಂಗೀತದ ಮಹತ್ತ್ವ ತಿಳಿಸುತ್ತಾ, ಭರತಮುನಿ ನಾಟ್ಯಶಾಸ್ತ್ರದಲ್ಲಿ ಹೇಳಿರುವುದು.

ಗೀತೇ ಪ್ರಯತ್ನಃ ಪ್ರಥಮಃ ತು ಕಾರ್ಯಃ
ನಾಟ್ಯಸ್ಯ ಶಯ್ಯಾಹಿ ವದಂತಿ ಗೀತಂ ॥
ಗೀತೇಚ ವಾದ್ಯೇಚ ಹಿ ಸಂಪ್ರಯುಕ್ತೇ
ನಾಟ್ಯ ಪ್ರಯೋಗೋ ನ ವಿಪತ್ತಿಮೇತಿ ॥

ಭಾಸ, ಕಾಳಿದಾಸ, ಶೂದ್ರಕರಂತಹ ಯಶಸ್ಸನ್ನು ಪಡೆದಿರುವ ನಾಟಕ ಕಾರರ ಕೃತಿಗಳಲ್ಲಿನ ಕೆಲವು ಉದಾಹರಣೆ ನೋಡಿ. ಭಾಸನ ನಾಟಕ ಚಕ್ರದಲ್ಲಿ ಸ್ವಪ್ನವಾಸವದತ್ತ ಮತ್ತು ಪ್ರತಿಜ್ಞಾಯೌಗಂಧ ರಾಯಣದಲ್ಲಿ ಸಂಗೀತದ ಸಂದರ್ಭ ವಿಶೇಷವಾಗಿ ಸಿಗುತ್ತದೆ. ಏಕೆಂದರೆ ನಾಯಕನಾದ ರಾಜ ಉದಯನನು ವೀಣಾವಾದನ ಪ್ರವೀಣನಾಗಿದ್ದ. ಮತ್ತು ನಾಯಕಿ ವಾಸವದತ್ತೆ ವೀಣೆಯಲ್ಲಿ ಸುಶಿಕ್ಷಿತಳಾಗಿದ್ದಳು. ಭಾಸನ ನಾಟಕಗಳಲ್ಲಿ ಕೆಲವು ಗಂಧರ್ವರ ಉಲ್ಲೇಖಗಳು ಈ ರೀತಿ ಇವೆ–

ಅಯೇ ಗಾಂಧರ್ವಧ್ವನಿಷು ಶ್ರೂಯತೇ ।
ಕೋನು ಸರ್ವಕಾಲ ಸುಖೀಪುರುಷಃ
ಕಾಂತಯಾ ಸಹ ಗಾಂಧರ್ವಮನುಭವತಿ ।

*   *   *   *

ಗಂಧರ್ವನ ಗುಣಗಳ ಬಗ್ಗೆ–

ರಕ್ತಂಚ ತಾರ ಮಧುರಂಚ,
ಸಮಮ್ ಸ್ಫುಟಂ............ ಇತ್ಯಾದಿ

ನಾರದೀಯ ವೀಣಾವಾದನ ಬೆರಳು ಮತ್ತು ಉಗುರುಗಳ ಮೂಲಕ ಮಾಡಲ್ಪಡುತ್ತಿದ್ದಿತೆಂದು ತಿಳಿದು ಬರುತ್ತದೆ.

*   *   *   *

ನಾಟಕದ ಪ್ರಾರಂಭ ನಾಂದಿಯಿಂದ ಆಗುತ್ತಿತ್ತು. ಇದಾದನಂತರವೇ ಸೂತ್ರಧಾರ ಪ್ರವೇಶಿಸುತ್ತಿದ್ದ. ಪ್ರೇಕ್ಷಕರ ಚಿತ್ತ–ಪ್ರಸಾದನಕ್ಕಾಗಿ ಸ್ತ್ರೀಯರ ಮೂಲಕ ಯೋಗ್ಯ ಹಾಡುಗಳನ್ನು ಹಾಡಿಸುತ್ತಿದ್ದರು.

*   *   *   *

ಪ್ರತಿಜ್ಞಾಯೌಗಂಧರಾಯಣಂ
ಮೇ ಅಯೇ ಗೀಯತಾಂ ಕಾವತ್ ವಸ್ತು ।
ತತಃ ತವಗೀತ ಪ್ರಸಾದಿತೇ
ರಂಗೇವಯಮದಿ ಪ್ರಕರಣಂ ಆರಂಭಾಮಹೇ॥

*   *   *   *

ಕವಿಕುಲಗುರು ಕಾಳಿದಾಸನ ನಾಟಕಗಳಲ್ಲಿ ಸಂಗೀತದ ಪ್ರತ್ಯಕ್ಷ ಪ್ರಯೋಗದ ಸ್ಪಷ್ಟ ಮತ್ತು ಸುಂದರ ಪ್ರಮಾಣಗಳಿವೆ. ಇದಕ್ಕೆ ಅಭಿಜ್ಞಾನ ಶಾಕುಂತಲವೇ ಸಾಕ್ಷಿ.

ನಾಂದಿಯನಂತರ ಸೂತ್ರಧಾರ ಬಂದು, ಕಾಳಿದಾಸವಿರಚಿತ ಅಭಿಜ್ಞಾನ ಶಾಕುಂತಲವ್– ಈ ಹೊಸನಾಟಕ ಪ್ರಯೋಗವನ್ನು ಮಾಡುತ್ತಾರೆಂದು ಘೋಷಣೆ ಮಾಡುತ್ತಾನೆ– ಈಗೇನು ಮಾಡುವುದೆಂದು ನಟಿ ಕೇಳಿದಮೇಲೆ ಹೇಳುವ–ಮನ್ಯೇದ್ ಅಸ್ಯಾಃ ಪರಿಷದಃ ಶ್ರುತಿ ಪ್ರಭೋ ವಹತೋಃ ಗೀತಾತ್ ಕರಣೀಯಂ ಅಸ್ತಿ?–ಈ ಸಭೆಯ (ಪರಿಷತ್‌ನ) ಕಿವಿಗಳನ್ನು ಸಂತೋಷಗೊಳಿಸಲು ಶ್ರುತಿ ಗೀತೆಗಳಿಗಿಂತ ಹೆಚ್ಚಾದ್ದು ಮತ್ತೇನು ಒಳ್ಳೆಯದಿದೆ? ಯಾವ ಋತುವಿಗೆ ಸಂಬಂಧಿಸಿದ ಹಾಡು ಹಾಡಬೇಕೆಂದು ನಟಿ ಪ್ರಶ್ನಿಸಿದರೆ ಸೂತ್ರಧಾರನ ಪರಿ

ಹಾರ; ಗ್ರೀಷ್ಮ ಋತು ಬಂದಿದೆ ಅದಕ್ಕೆ ಸಂಬಂಧಿ ಹಾಡು ಹಾಡಲ್ಪಡಲಿ. ನಟಿ ಹಾಡುತ್ತಾಳೆ–

ಈಷದೀಷದಪಿ ಚುಂಬಿತಾನಿ ಭ್ರಮರೈಃ
ಸುಕುಮಾರತರ ಕೇಸರ ಶಿಖಾನಿ
ಅವತಂಸಯಂತಿ
ದಯಮಾನಾಃ ಪ್ರಮದಾಃ ಶಿರೀಷ ಕುಸುಮಾನಿ

–ಇದು ಪಾಠ್ಯವೃತ್ತ ಅಥವಾ ಛಂದಸ್ಸಲ್ಲವೆಂಬುದು ನಮಗೆ ತಿಳಿಯುತ್ತದೆ. ಆದರೂ ಒಂದು ಗೇಯ ಪ್ರಬಂಧದಂತೆ ಇದರ ವಿಧಾನ ಕಾಣುತ್ತದೆ.

ಸೂತ್ರಧಾರನ ಮೂಲಕ ಹಾಡಿನ ಪ್ರಶಂಸೆ, 'ಆರ್ಯೆ, ನೀನಾದರೋ ಬಹಳ ಸುಂದರವಾಗಿ ಹಾಡಿದೆ. ಇಡೀ ರಂಗ ಸಭೆಯೇ ಚಿತ್ರದಂತೆ ಸ್ತಬ್ಧವಾಗಿರುವುದೋ ಎನ್ನುವಂತೆ ಪ್ರೇಕ್ಷಕಗಣ ಮೋಹಿತಗೊಂಡಿದೆ.'

ಐದನೇ ಅಂಕದಲ್ಲಿ ಸಂಗೀತದ ಮೂಲಕ ಭಾವನೆಗಳ ಉನ್ಮೀಲನ ಮತ್ತು ಪೂರ್ವ ಸ್ಮೃತಿಯ ಅಸ್ಪಷ್ಟ ಜಾಗೃತಿಯ ಅತ್ಯಂತ ಕೋಮಲ ಮತ್ತು ಭಾವಪೂರ್ಣ ಅಭಿವ್ಯಕ್ತಿ ಸಂಗೀತದ ಮೂಲಕ ಮಾಡಲ್ಪಟ್ಟ ಮಾಲವಿಕಾಗ್ನಿ ಮಿತ್ರದ ಇಬ್ಬರು ಆಚಾರ್ಯರ ಶಿಷ್ಯದ್ವಯರ ಕಲಾ ಪ್ರದರ್ಶನ ಸ್ಪರ್ಧೆಯ ರೂಪದಲ್ಲಿ ರಾಜನ ಸಮಕ್ಷದಲ್ಲಿ ಮಾಡಲ್ಪಡುವ ಪ್ರಸಂಗವಿದೆ.

ಇಲ್ಲಿ ಸಂಗೀತದ ಪಾರಿಭಾಷಿಕ ಶಬ್ದ ಮತ್ತು ಪ್ರಕ್ರಿಯೆಗಳ ವರ್ಣನೆಯಿಂದ ಕಾಳಿದಾಸನ ಸಂಗೀತದ ವಿದ್ಯೆಯ ಸಮ್ಯಕ್ ಜ್ಞಾನದ ಪರಿಚಯವಾಗುತ್ತದೆ. ಆಚಾರ್ಯ ಗಣದಾಸರ ಪ್ರತಿಭಾಶಾಲಿ ರೂಪವತೀ ಶಿಷ್ಯೆ ಮಾಲವಿಕಾಳ ಬಗ್ಗೆ– ಮಾಲವಿಕಾ ಉಪಾಂಗನಂ ಕೃತ್ವಾ ಚತುರೂಪದ ವಸ್ತು ಗಾಯತಿ–ಅಂದರೆ ಪ್ರಾರಂಭಿಕ ಸ್ವರಾಲಾಪ ಮಾಡಿ ಮಾಲವಿಕಾ ನಾಲ್ಕು ಪಾದಗಳ ಗೀತೆಯನ್ನು ಹಾಡುತ್ತಾಳೆ.

ಶೂದ್ರಕನ ಮೃಚ್ಛಕಟಿಕಂನ ಬಗ್ಗೆಯೂ ಉಲ್ಲೇಖವೂ ಬಹಳ ಪ್ರಚುರವಾಗಿರುವುದು ತಿಳಿದು ಬರುತ್ತದೆ. ಏಕೆಂದರೆ ನಾಯಕ ಚಾರುದತ್ತ ಸಂಗೀತ ವಿದ್ಯೆಯ ಕ್ರಿಯಾಶೀಲಕಲಾಕಾರ ಮತ್ತು ರಸಿಕ ಮರ್ಮಜ್ಞ. ಅವನ ಮನೆಯಲ್ಲಿ ಸಮಸ್ತ ವಾದ್ಯಗಳೂ ಸಂಗ್ರಹವಾಗಿವೆ. ರೂಪಗುಣ ಸಂಪನ್ನೆ ಸಂಗೀತ ನೃತ್ಯಾಂಗನಾ ವಸಂತಸೇನೆಯೇ ನಾಯಕಿ. ಗಾಂಧರ್ವರ ತತ್ತ್ವ ಮತ್ತು ಗುಣಗಳ ವರ್ಣನೆ, ವಾದ್ಯಗಳ ವರ್ಣನೆ ಸಂಗೀತ ಗೋಷ್ಠಿಯಲ್ಲಿ ಕಲೆಯ ಆಸ್ವಾದನ-ಮೃಚ್ಛಕಟಿಕಂನಲ್ಲಿ ತುಂಬಿ ಹೋಗಿದೆ – ವಂಶಂ ವಾದಯಾಮಿ ಸಪ್ತಚ್ಛಿದ್ರಂ, ವೀಣಾಂ ವಾದಯಾಮಿ ಸಪ್ತತಂತ್ರೀಂ ನದಂತೀಂ.

ಈಗ ವಾದ್ಯಗಳ ಉಲ್ಲೇಖವನ್ನು ನೋಡೋಣ

ಸಮಂತಾದನ ಲೋಕ್ಯ–

ಅಯೇ ಕಥಂ ಮೃದಂಗಃ ಅಯಂ ದರ್ದುರಃ,
ಅಯಂ ಪಣವಃ, ಇಯಮಪಿ ವೀಣಾ
ಏತೇ ವಂಶಾಃ।
ಕಥಂ ನಾಟ್ಯಾಚಾರ್ಯಸ್ಯ ಗೃಹಮಿದಂ।

ಸಂಸ್ಕೃತ ಕಾವ್ಯದ ಪ್ರಾಂಗಣದಲ್ಲಿ ಕಾಳಿದಾಸನ ರಘುವಂಶ, ಕುಮಾರಸಂಭವ, ಋತುಸಂಹಾರ, ಮೇಘದೂತಗಳಲ್ಲಿ ಮತ್ತು ಮಾಘನ ಶಿಶುಪಾಲನ ವಧಂನಲ್ಲಿ ಸಂಗೀತದ ಉಲ್ಲೇಖವಿದೆ. ಇಲ್ಲಿ ಮೇಘದೂತದಿಂದ ಒಂದು ಪ್ರಸಂಗ ನೋಡೋಣ

ತಂತ್ರೀಮಾದ್ರಾಂ ನಯನಸಲಿಲೈಃ
ಸಾರಯಿತ್ವಾ ಕಥಂಚಿತ್
ಭೂಯೋ ಭೂಯಃ ಸ್ವಯಮಪಿ ಕೃತಾಂ
ಮೂರ್ಛನಾಂ ವಿಸ್ಮರಂತೀ

ವಿರಹಿಣಿ ಯಕ್ಷರತ್ನಿ ವೀಣೆಯ ತಂತಿಯನ್ನು ಅಶ್ರುಜಲದಿಂದ ತೊಯ್ಸಿದ್ದಾಳೆ, ಸ್ವರದಲ್ಲಿ ಸೇರಿಸಿದ್ದಾಳೆ; ಆದರೆ ದುಃಖಾವೇಗದ ಕಾರಣ ಸ್ವತಃ ತನ್ನ ಯೋಜನೆಯ ಮೂರ್ಛನೆಯೇ ಅವಳಿಗೆ ಬಾರಿ-ಬಾರಿಗೂ ವಿಸ್ಮರಣೆಯಾಗುತ್ತಿದೆ.

೧೨ ನೇ ಶ. ಮಾ ಪ ಗೀ ತ ಗೋ ವಿಂ ದ ಸಂಸ್ಕೃತ ಸಾಹಿತ್ಯದಲ್ಲಿ ಒಂದು ಅಮೂಲ್ಯ ರಚನೆ. ಕೃಷ್ಣ ಭಕ್ತ ಮಹಾ ಕವಿ ಯಾ ದ ಜಯದೇವನ ಈ ಗೀತ ಕಾವ್ಯದಲ್ಲಿ ಸಾಹಿತ್ಯ ಮತ್ತು ಸಂಗೀತದ ಅತಿರಮಣೀಯ ಸಂಗಮವಿದೆ. ಇದರಲ್ಲಿ ೨೪ ಗೇಯ ಪ್ರಬಂಧಗಳಿವೆ. ಇವುಗಳಲ್ಲಿ ರಾಗ ತಾಳಗಳ ಹೆಸರು ಅಂಕಿತವಾಗಿದೆ. ರಾಧಾ, ಕೃಷ್ಣ ಮತ್ತು ಸಖಿ ಮೂರು ಪಾತ್ರಗಳಿವೆ. ಲೌಕಿಕ ಮತ್ತು ಆಧ್ಯಾತ್ಮಿಕ ಉತ್ಕೃಷ್ಟ ಶೃಂಗಾರ ರಸದ ಒಟ್ಟಾರೆ ದರ್ಶನವಾಗುತ್ತದೆ. ವಸ್ತು ಮತ್ತು ಭಾವಾಭಿವ್ಯಕ್ತಿಯ ದೃಷ್ಟಿಯಿಂದ ನೋಡಿದ್ದಾದರೆ ಸಂಗೀತ, ನೃತ್ಯ ಮತ್ತು ಚಿತ್ರಕಲೆಗಳ ಬಗ್ಗೆ ಗೀತಗೋವಿಂದವು ಬಹು ಅಮೂಲ್ಯ ಕೊಡುಗೆಯನ್ನು ಭಾರತೀಯ ಸಂಗೀತ ನೃತ್ಯ ಚಿತ್ರ ಪರಂಪರೆಗೆ ನೀಡಿದೆ.

ಈ ಕೃತಿ ಸರ್ವವ್ಯಾಪಿ ಆಕರ್ಷಣೆಯಿಂದ ಕೇವಲ ಭಾರತೀಯ ಭಾಷೆಗಳಗಲ್ಲದೆ ಇಂಗ್ಲೀಷ್ ಫ್ರೆಂಚ್, ಜರ್ಮನ್ ಇತ್ಯಾದಿ ಯಾರೋಪೀಯ ಭಾಷೆಗಳಿಗೂ ಸಹ ಅನುವಾದಗೊಂಡಿದೆ.

ಈ ಮಧುರ ಕೋಮಲ ಕಾಂತ ಪದಾವಲಿಯ ಚಿಕ್ಕದೊಂದು ಉದಾಹರಣೆ ಕೊಡಲ್ಪಟ್ಟಿದೆ–

ಪ್ರಬಂಧಃ ತೃತೀಯಃ ವಸಂತರಾಗಯತಿ
ತಾಲಾಭ್ಯಾಂ ಗೀಯತೇ ।
ಲಲಿತ ಲವಂಗಲತಾ ಪರಿಶೀಲನ
ಕೋಮಲ ಮಲಯ ಸಮೀರೆ ।
ಮಧುಕರ ನಿಕರ ಕರಂಬಿತ ಕೋಕಿಲ
ಕೂಜಿತ ಕುಂಜ ಕುಟೀರೆ ।
ವಿಹರತಿ ಹರಿರಿಹ ಸರಸವಸಂತೇ
ನೃತ್ಯತಿ ಯುವತಿಜನೇನ ಸಮಂ ಸಖಿ

★

## ಗೃಹಲಕ್ಷ್ಮಿ

# ಅಹಲ್ಯಾಬಾಯಿ



ಅಹಲ್ಯಾ, ದ್ರೌಪದಿ, ಸೀತಾ, ತಾರಾ, ಮಂಡೋದರಿ ಮೊದಲಾದವರ ಹೆಸರುಗಳನ್ನು ಪ್ರತಿದಿನವೂ ಭಾರತೀಯರು ಸ್ಮರಿಸಿಕೊಳ್ಳುವುದುಂಟು. ಈ ಸ್ತೋತ್ರದಲ್ಲಿ ಬರುವ ಅಹಲ್ಯಾ ಹೆಸರು ಶ್ರೀರಾಮನಿಂದ ಉದ್ಧಾರಳಾದ ಋಷಿ ಪತ್ನಿಯದಾಗಿರುವುದು. ಆದರೆ ಇಲ್ಲಿ ಹೇಳುತ್ತಿರುವ ವಿಷಯವು ಮಧ್ಯಯುಗದ ಭಾರತಕ್ಕೆ ಸಂಬಂಧಿಸಿದ ಉದಾತ್ತ ಮಹಿಳೆಯೊಬ್ಬಳ ಜೀವನ ಚರಿತ್ರೆಯ ವಿಷಯ. ಭಾರತದ ಯಾವ ಕ್ಷೇತ್ರಕ್ಕೇ ನೀವು ಭೇಟಿಯನ್ನಿತ್ತರೂ ಈ ಮಹಾತಾಯಿಯಿಂದ ರಕ್ಷಿಸಲ್ಪಟ್ಟ ದೇವಮಂದಿರಗಳನ್ನು ಕಾಣಬಹುದು. ಈ ಸಾಧ್ವೀ ಶಿರೋಮಣಿಯ ಜೀವನ ಭಾರತೀಯರೆಲ್ಲರಿಗೂ ಬೋಧಪ್ರದ ವಿಷಯ.

ಚೌನಡಿ ಔರಂಗಾಬಾದ ಜಿಲ್ಲೆಗೆ ಸೇರಿದ ಒಂದು ಹಳ್ಳಿ. ಗ್ರಾಮನಿವಾಸಿಗಳಾಗಿದ್ದ ಮಾಣಕೋಜಿ ಹಾಗೂ ಸುಶೀಲಾ ದಂಪತಿಗಳಲ್ಲಿ ಕ್ರಿ.ಶ. 1725 ಸುಮಾರಿನಲ್ಲಿ ಹೆಣ್ಣು ಮಗುವಿನ ಜನನವಾಯಿತು. ಅವಳು ಗ್ರಾಮ ಲಕ್ಷ್ಮಿಯಂತೆ ಬೆಳೆಯತೊಡಗಿದಳು. ಎಂಟು ವರ್ಷದ ಬಾಲಕಿಯಾಗಿದ್ದಾಗ ಒಂದುಸಲ ದೇವಾಲಯದಲ್ಲಿ ಮಲ್ಹಾರ ರಾವ್ ಹೋಳ್ಕರರ ಗಮನಕ್ಕೆ ಬರುವಂತಾಳು. ಸಲಕ್ಷಣಯುಕ್ತಳಾದ ಇವಳನ್ನು ತಮ್ಮ ಮನೆಯ ಸೊಸೆಯಾಗಿ ತಂದುಕೊಳ್ಳಲು ನಿರ್ಧರಿಸಿದರು. ಅದಕ್ಕೆ ಕಾರಣವೂ ಇತ್ತು, ಮಗನಾಗಿದ್ದ ಖಂಡೇರಾಯನು ಮಹಾ ಮುಂಗೋಪಿಯಾಗಿದ್ದ, ವಿಲಾಸಿಯಾಗಿದ್ದ. ಮಧ್ಯಪಾನಾಸಕ್ತನಾಗಿದ್ದ. ಅಂಥ ಮಗನನ್ನು ಸರಿಯಾದ ದಾರಿಗೆ ತರಬೇಕಾಗಿದ್ದಲ್ಲಿ ಬಡಕುಟುಂಬದಲ್ಲಿ ಹುಟ್ಟಿದ ಈ ಮಗು ಯೋಗ್ಯಳು ಎಂಬುದೇ ಅವರ ನಿರ್ಧಾರವಾಗಿತ್ತು. ತಮ್ಮ ಸಂಕಲ್ಪವು ಕೈಗೂಡುವಂತೆ ಅವರು ನೋಡಿಕೊಂಡರು.

ಮಲ್ಹಾರರಾಯರು ಸೊಸೆಗೆ ರಾಜ್ಯಾಂಗದ ಎಲ್ಲ ವ್ಯವಹಾರಗಳಲ್ಲಿ ಶಿಕ್ಷಣವು ದೊರೆಯುವಂತೆ ನೋಡಿಕೊಂಡರು. ಯುದ್ಧಕೌಶಲ್ಯದಲ್ಲಿ ಪರಿಣತಳಾಗುವಂತೆ ಮಾಡಿದರು. ಸಂಸ್ಕೃತ ಸಾಹಿತ್ಯದಲ್ಲಿ ಕಾವ್ಯ ನಾಟಕಗಳಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದರು ಅವರಿಗೆ ಅಹಲ್ಯಾಬಾಯಿ ಸೊಸೆಯಾಗಿರದೆ ಮಗಳಾಗಿ ಬಾಳಿದಳು.

ಪತಿಯೇ ಪರದೈವ, ಪಾಲಿಗೆ ಬಂದುದೇ ಪಂಚಾಮೃತ ಎಂಬ ಭಾವನೆಯಲ್ಲಿ ಪೂರ್ಣ ನಂಬಿಕೆಯನ್ನಿಟ್ಟಿದ್ದ ಅಹಲ್ಯಾಬಾಯಿಯು ತನ್ನ ಸಂತತವಾದ ಪ್ರಯತ್ನದಿಂದ ಪತಿಯ ಮನಸ್ಸನ್ನೊಲಿಸಿಕೊಂಡಳು. ಒಂದು ಗಂಡು ಹಾಗೂ ಹೆಣ್ಣು ಮಗುವಿನ ತಾಯಿಯಾಗಿ ಹೋಳ್ಕರಮನೆತನಕ್ಕೆ ಸಂತಾನದ ಕುಡಿಯನ್ನೊದಗಿಸಿದಳು. 1754ರಲ್ಲಿ ಜಾಟರೊಂದಿಗೆ ಕುಂಭೇರಿ ಕೋಟೆಯಬಳಿ ಘನಘೋರ ಯುದ್ಧ ನಡೆದಾಗ, ಈ ಯುದ್ಧದಲ್ಲಿ ಅವಳು ಪತಿಯಾದ ಖಂಡೇರಾಯರನ್ನು ಕಳೆದುಕೊಳ್ಳುವಂತಾಯಿತು. ಸತಿ ಹೋಗುವ ಸಿದ್ಧತೆಯಲ್ಲಿದ್ದಾಗ ಪ್ರಜೆಗಳ ಆಗ್ರಹಕ್ಕೆ ಬೆಲೆಕೊಟ್ಟು ಮಾವನ ಸೇವೆಗೆಂದು ಬದುಕುಳಿದಳು. ರಾಜವೈಭವದ ಚಿಹ್ನೆಗಳನ್ನೆಲ್ಲ ತೊರೆದು ವಿರಾಗಿಣಿಯಂತೆ ಶುಭ್ರ ವಸ್ತ್ರಗಳನ್ನು ಧರಿಸಿ ಸದಾಕಾಲ ಪೂಜೆ, ಧ್ಯಾನಗಳಲ್ಲಿ ದಿನಗಳೆಯತೊಡಗಿದಳು.

1761 ರಲ್ಲಿ ನಡೆದ ಪಾಣಿಪತ್ ಯುದ್ಧದಲ್ಲಿ ಅಹಲ್ಯಾಬಾಯಿ ಸಹ ಭಾಗವಹಿಸಿದ್ದಳು. ಮರಾಠರಿಗಾದ ಸೋಲಿನಿಂದಾಗಿ ಉತ್ತರ ಭಾರತದ ಅನೇಕ ಸಣ್ಣಪುಟ್ಟರಾಜರು ಸ್ವತಂತ್ರರಾಗಲು ಪ್ರಯತ್ನಿಸತೊಡಗಿದ್ದರು. ಆಗ ರಘುನಾಥಪಂತ ಪೇಶ್ವೆ (ರಾಘೋಭರಾರಿ) ಮಿಂಚಿನಂತೆ ಸಂಚಾರಮಾಡಿ ಸಿಂಧೇ ಹೋಳ್ಕರರ ಸಹಾಯದಿಂದ ಅವರೆಲ್ಲರ ಸೊಕ್ಕನ್ನಡಗಿಸಿದ. ಮುಂದೆ 1766 ರಲ್ಲಿ ಮಲ್ಹಾರ ರಾವ್ ಹೋಳ್ಕರರು ನಿಧನ ಹೊಂದಿದರು. ಆಗ ಚಂದ್ರಚೂಡ ಎಂಬ ಬ್ರಾಹ್ಮಣನೊಬ್ಬನು ಅಬಲೆಯಾದ ಅಹಲ್ಯಾಬಾಯಿಯ ರಾಜ್ಯವನ್ನು ಕೈವಶ ಮಾಡಿಕೊಂಡಲ್ಲಿ ಉತ್ತರದಲ್ಲಿ ನೀವು ಸ್ವತಂತ್ರವಾಗಿ ರಾಜ್ಯಭಾರ ಮಾಡಬಹುದೆಂದು ರಾಘೋಬಾದಾದಾನಿಗೆ ಕಿವಿಯೂದಿದ. ಆತನ ಮಾತಿಗೆ ಮರುಳಾದ ರಾಘೋಬಾ ಅಪಾರ ಸೇನೆಯೊಂದಿಗೆ ಉಜ್ಜಯಿನಿಯ ಸಮೀಪದಲ್ಲಿರುವ ಕ್ಷಿಪ್ರಾನದಿಯ ದಂಡೆಯ ಮೇಲೆ ಸೇನಾಶಿಬಿರವನ್ನು ರಚಿಸಿ ಯುದ್ಧ ತಯಾರಿಯನ್ನು ನಡೆಸಿದ. ಆಗ ಪಂತಪ್ರಧಾನರಾಗಿದ್ದ ಪೇಶ್ವೆಯವರ ಸುಬೇದಾರಿಕೆಯ ಜವಾಬ್ದಾರಿಯಲ್ಲಿದ್ದ ಅಹಲ್ಯಾಬಾಯಿಯು ರಾಘೋಬಾ ಈತನಿಗೆ ಒಂದು ಪತ್ರವನ್ನು ಬರೆದಳು.

"ತುಕೋಜಿಯೊಂದಿಗೆ ನನ್ನ ಸೇನೆಯು ಕ್ಷಿಪ್ರಾನದಿಯ ಇನ್ನೊಂದು ದಡದಲ್ಲಿ ಸಿದ್ಧವಾಗಿ ನಿಂತಿದೆ. ನಾನು ನನ್ನ ಮಹಿಳಾಪಥಕವನ್ನೂ ಕಳಿಸುತ್ತಲಿದ್ದೇನೆ. ಒಂದುವೇಳೆ ನಾವು ಈ ಯುದ್ಧದಲ್ಲಿ ಸೋತರೆ ಮಹಿಳೆಯರಿಂದ ಪರಾಜಿತರಾದ ಅವಮಾನಕ್ಕೆ ಗುರಿಯಾಗುವಿರಿ. ಒಂದುವೇಳೆ ನೀವೇ ಗೆದ್ದಲ್ಲಿ ಅಬಲೆಯ ಮೇಲೆ ಆಕ್ರಮಣಮಾಡಿದಿರಿ ಎಂಬ ಅಪಖ್ಯಾತಿಗೆ ಗುರಿಯಾಗುವಿರಿ. ಆದುದರಿಂದ ವಿಚಾರಮಾಡಿ ಮುನ್ನಡೆಯುವುದು ವಿಹಿತ".

ಪುಣೆಯ ದರ್ಬಾರಿನವರು ರಾಘೋಬಾದಾದನಿಗೆ ಛೀಮಾರಿಹಾಕಿ ಪತ್ರಬರೆದರು. ಆಗ ಆತನು ಅಹಲ್ಯಾಬಾಯಿಗೆ ಪತ್ರವನ್ನು ಬರೆದ.

"ನಾವು ಆಕ್ರಮಣಕ್ಕಾಗಿ ಬಂದವರಲ್ಲ. ನಿಮ್ಮನ್ನು ಕಂಡು ಸಾಂತ್ವನದ ಮಾತಾಡಿ ಹೋಗಲು ಬಂದಿದ್ದೇನೆ".

ಈ ಪತ್ರಕ್ಕೆ ಉತ್ತರರೂಪದಲ್ಲಿ ಅಹಲ್ಯಾಬಾಯಿಯು, "ಹಾಗಾದರೆ ಈ ಸೈನ್ಯದ ಅಟ್ಟಹಾಸವೇಕೆ? ಈ ರಾಜ್ಯ ನಿಮ್ಮದು. ಈ ಮನೆಯೂ ನಿಮ್ಮದು. ಮಿತಪರಿವಾರದಿಂದ ಬಂದು ಹೋಗಲು ಯಾವ ಅಭ್ಯಂತರವೂ ಇಲ್ಲ". ಅವಳ ಅಭಿಪ್ರಾಯದಂತೆ ರಾಘೋಬಾ, ಮಿತ ಪರಿವಾರದೊಂದಿಗೆ ಬಂದು ಅವಳನ್ನು ಭೇಟಿಯಾಗಿ ಮರಳಿದ.

ಪತಿ ಹಾಗೂ ಮಾವ ಇಬ್ಬರನ್ನೂ ಕಳೆದುಕೊಂಡ ಇವಳು ಇಂದೂರಿನಿಂದ ನರ್ಮದಾ

ಶ್ರೀ ಆದ್ಯರಾಮಾಚಾರ್ಯ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಅರ್ಪಣೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ನದಿಯ ದಂಡೆಯ ಮೇಲಿರುವ ಮಹೇಶ್ವರಕ್ಕೆ ತನ್ನ ರಾಜಧಾನಿಯನ್ನು ಬದಲಿಸಿದಳು. ಹಿಂದೂಪದ ಪಾದಶಾಹಿತ್ವದ ಶತ್ರುಗಳ ಸದ್ದಡಗಿಸಲು ಪೇಶ್ವೆಯರಿಗೆ ಸದಾಕಾಲವೂ ನೆರವಾಗಿ ನಿಂತಳು. ತನ್ನ ರಾಜ್ಯದಲ್ಲಿ ಪುಟಿತು ನಿಂತಿದ್ದ ಮೋಕ್ಷಿಮಾ, ಸೋನಧೀ ಹಾಗೂ ಭಿಲ್, ಮತ್ತು ಗಣಪತರಾವ್ ಮರಾಠ-ಇವರ ಬಂಡನ್ನಡಗಿಸಲು ತನ್ನೆಲ್ಲ ಸರದಾರರನ್ನು ಒಟ್ಟುಗೂಡಿಸಿ– ಯಾರು ಈ ಪುಂಡರ ಸೊಕ್ಕನ್ನಡಗಿಸುವರೋ ಅಂಥ ವೀರರಿಗೆ ತನ್ನ ಮಗಳನ್ನು ಧಾರೆ ಎರೆದು ಕೊಡುವುದಾಗಿ– ಸಾರಿದಳು. ಯಶ್ವಂತರಾವ್ ಫಣಸೆ ಎಂಬ ತರುಣನು ಈ ಆಹ್ವಾನವನ್ನು ಸ್ವೀಕರಿಸಿದ. ಒಂದು ವರುಷ ಅವ್ಯಾಹತವಾಗಿ ಹೋರಾಡಿ ಪುಂಡರನ್ನೆಲ್ಲ ಸದೆಬಡಿದ. ಇದರಿಂದ ಕೊಟ್ಟ ಮಾತಿನಂತೆ ಅಹಲ್ಯಾಬಾಯಿಯು ಆ ತರುಣನಿಗೆ ತನ್ನ ಮಗಳನ್ನಿತ್ತು ವಿವಾಹ ಮಾಡಿದಳು.

ಅಹಲ್ಯಾಬಾಯಿ ಅತ್ಯಂತ ಧೀರ ಮಹಿಳೆಯಾಗಿದ್ದಳು. ಬಹು ದಕ್ಷವಾದ ಆಡಳಿತವು ಅವಳದಾಗಿತ್ತು. ಜಿಲ್ಲೆ, ತಹಶೀಲು ಹಾಗೂ ಪಂಚಾಯತಿ ಎಂಬುದಾಗಿ ತನ್ನ ರಾಜ್ಯವನ್ನು ವಿಂಗಡಿಸಿದಳು. ಪ್ರಜೆಗಳಿಗೆ ಅನ್ಯಾಯವಾಗದಂತೆ ಜಾಗರೂಕಳಾಗಿರುತ್ತಿದ್ದಳು. ರೈತರ ಕಲ್ಯಾಣಕ್ಕಾಗಿ ನಾನಾ ಯೋಜನೆಗಳನ್ನು ಸಿದ್ಧಪಡಿಸಿದಳು. ಮಹೇಶ್ವರದ ಕೈಮಗ್ಗದ ಸೀರೆಗಳು ಭಾರತಾದ್ಯಂತ ಹೆಸರು ಗಳಿಸುವಂತಾದವು. ಮಲ್ಹಾರರಾಯರ ಕಾಲದಲ್ಲಿ ಎಪ್ಪತ್ನಾಲ್ಕು ಲಕ್ಷ ವರ್ಷಾದಾಯವಿದ್ದ ಇವಳ ರಾಜ್ಯದಲ್ಲಿ ಈಕೆಯ ಕಾಲದಲ್ಲಿ ಪ್ರತಿವರುಷ ಒಂದುನೂರು ಐದುಲಕ್ಷರೂಪಾಯಿಗಳ ಆದಾಯ ಬರುವಂತಾಯಿತು.

ಮಹಾರಾಷ್ಟ್ರದ ಪಂತ ಪ್ರಧಾನರು ಹೋಳ್ಕರ ಮನೆತನಕ್ಕೆ ಪ್ರತಿವರುಷ ನೂರುಲಕ್ಷ ಆದಾಯವಿರುವ ಜಹಗೀರಿಯನ್ನು ದಯಪಾಲಿಸಿದ್ದರು. ಮಲ್ಹಾರರಾಯರು ನಿಧನರಾದಾಗ ಈ ಖಾಸಗೀ ಜಹಗೀರಿಯ ಹಣದ ಮೊತ್ತವು ಹದಿನಾರು ಕೋಟಿಯನ್ನು ಅವರ ಸ್ವಂತದ ಖಜಾನೆಯಲ್ಲಿತ್ತು. ಅಹಲ್ಯಾಬಾಯಿಯು ಆ ಹಣವನ್ನೆಲ್ಲ ಪ್ರಾಚೀನ ಭಾರತದ ತೀರ್ಥ ಕ್ಷೇತ್ರಗಳಲ್ಲಿರುವ ದೇವಾಲಯಗಳ ಪುನರುದ್ಧಾರಕ್ಕಾಗಿಯೂ, ಅಗ್ರಹಾರಗಳ ನಿರ್ಮಾಣಕ್ಕಾಗಿಯೂ, ವೇದಪಾಠಶಾಲೆಗಳನ್ನು ನಡೆಸಿಕೊಂಡು ಹೋಗುವುದಕ್ಕಾಗಿಯೂ, ಸ್ನಾನಘಟ್ಟಗಳನ್ನು ನಿರ್ಮಿಸುವದಕ್ಕಾಗಿಯೂ, ಪರ್ವಕಾಲಗಳಲ್ಲಿ ಪುಣ್ಯಕ್ಷೇತ್ರಗಳಲ್ಲಿ ದಾನಧರ್ಮಾದಿಗಳು ನಡೆಯುವದಕ್ಕಾಗಿಯೂ,ವಿನಿಯೋಗಿಸಿದಳು. ಕುರುಕ್ಷೇತ್ರ, ಕಾಶಿ, ಅಯೋಧ್ಯಾ, ಮಥುರಾ, ಗೋಕರ್ಣ, ಪಂಢರಪುರ– ಹೀಗೆ ಒಂದೇ ಎರಡೇ– ಯಾವ ಸ್ಥಳಕ್ಕೆ ಹೋದರೂ ಈ ದೇವಾಲಯ

ಈ ಸ್ನಾನಘಟ್ಟ –ಇವುಗಳೆಲ್ಲ ಅಹಲ್ಯಾಬಾಯಿಯಿಂದ ಕಟ್ಟಿಸಲ್ಪಟ್ಟಿವೆ ಎಂದು ಇಂದಿಗೂ ಸ್ಥಳ ನಿವಾಸಿಗಳು ತೋರಿಸುವುದುಂಟು.

ಈ ಮಹಾಸಾಧ್ವಿಯು ದಕ್ಷಿಣದಲ್ಲಿರುವ ರಾಮೇಶ್ವರ, ಕಂಚಿ ಹಾಗೂ ತಿರುಪತಿ ಕ್ಷೇತ್ರಗಳಲ್ಲಿಯೂ ಸಹ ಅನೇಕ ಸೇವೆ ಮಾಡಿದಳೆಂದು ಇಂದೂರಿನ ಜನರು ಹೇಳುವುದುಂಟು. ಆದರೆ ಅವುಗಳಿಗೆ ಸಾಕ್ಷಿಭೂತವಾಗಿ ನಾವು ಕೆಲವಾದರೂ ದಾಖಲೆಗಳನ್ನು ಹುಡುಕಿ ತೆಗೆಯಬೇಕಾಗಿದೆ. (ಕಾಲಾವಕಾಶವು ಕಡಿಮೆ ಇದ್ದುದರಿಂದ ಈ ಕಾರ್ಯವನ್ನು ನಾನು ಸಾಧಿಸಲಾಗಲಿಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ).

ಈ ತಾಯಿಯ ಕೀರ್ತಿಯನ್ನು ಕೇಳಿದ ಅಂದಿನ ಕಾಲದ ಸುಪ್ರಸಿದ್ಧ ಕವಿಯಾಗಿದ್ದ "ಖುಯಾಲ ರಾಮ" ಎಂಬಾತನು "ಅಹಲ್ಯಾ ಕಾಮಧೇನು" ಎಂಬ ಹೆಸರಿನ ಕಾವ್ಯವನ್ನೇ ರಚಿಸಿದ್ದಾನೆ. ಇದೇ ರೀತಿಯಲ್ಲಿ ಮರಾಠಿಕವಿ ಮೋರೋ ಪಂತನಂತೂ ತನ್ನ ಕಾವ್ಯದಲ್ಲಿ "ಅಮ್ಮಾ ನೀನು ಬೇರೆಯಲ್ಲ ಈ ಗಂಗಾಮಾತೆ ಬೇರೆಯಲ್ಲ, ನೀವಿಬ್ಬರೂ ಜನ ಕಲ್ಯಾಣಕ್ಕಾಗಿ, ಭಾರತೀಯರ ಉದ್ಧಾರಕ್ಕಾಗಿ ಈ ಪುಣ್ಯಭೂಮಿಯಲ್ಲಿ ನಮಗೆ ಕಾಣುವಂತಾಗಿರುವಿರಿ" ಎಂದು ವರ್ಣಿಸಿದ್ದಾನೆ.

ಕೈಹಿಡಿದು ಬಂದ ಪತಿ, ಪಿತೃವಾತ್ಸಲ್ಯದಿಂದ ಅವಳನ್ನು ಬೆಳೆಸಿದ ಮಾವ, ಹೆತ್ತ ಮಗ, ವೀರನಾದ ಅಳಿಯ ಹಾಗೂ ಮಗಳನ್ನು ಕಳೆದುಕೊಂಡ ಈ ಸಾಧ್ವಿಯು ತನ್ನ ಪ್ರಜೆಗಳನ್ನೇ ಮಕ್ಕಳಂತೆ ಜೋಪಾನಮಾಡಿದಳು. ಭಾರತೀಯ ಸಂಸ್ಕೃತಿಯನ್ನುಳಿಸುವುದೇ ತನ್ನ ಉಸಿರು ಎಂಬಂತೆ ನಡೆದುಕೊಂಡಳು. ಅರವತ್ತು ವರುಷಗಳಕಾಲ ಹೋಳ್ಕರ ಮನೆತನದ ಸೊಸೆಯಾಗಿ ಬಾಳಿದ ಇವಳು ಮುವತ್ತು ವರುಷಗಳಕಾಲ ರಾಜ್ಯಭಾರವನ್ನು ನಿರ್ವಹಿಸಿದಳು.

ಧರ್ಮಪರಾಯಣಳಾಗಿ ಬಾಳಿದ ಈ ಸಾಧ್ವಿ 1795 ರಲ್ಲಿ ತನ್ನ ಇಹಲೋಕ ದಯಾತ್ರೆಯನ್ನು ಮುಗಿಸಿದಳು. ಇಂದು ಅವಳು ನಮ್ಮ ಬಾಹ್ಯಚಕ್ಷುವಿಗೆ ದೂರಾಗಿದ್ದರೂ ಅವಳಿಂದ ನಿರ್ಮಿತವಾದ ದೇವಾಲಯಗಳು, ಸ್ನಾನಘಟ್ಟಗಳು, ಧರ್ಮಛತ್ರಗಳು ಇಂದಿಗೂ ಆ ತಾಯಿಯ ದಿವ್ಯ ದರ್ಶನ ಮಾಡಿಸಲು ನಮ್ಮ ಕಣ್ಮುಂದೆ ಉಳಿದುಕೊಂಡು ಬಂದಿರುವುದು ಭಾರತೀಯರಿಗೆ ಒಂದು ರೀತಿಯ ಸಮಾಧಾನವನ್ನುಂಟುಮಾಡುವುದು.



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಕೇತಕಿಯು ಪ್ರಜಾಪತಿ ದಕ್ಷನ ಮಗಳು ರೂಪಗುಣ ಸಂಪನ್ನಳೂ, ಶೀಲ ಹಾಗೂ ಆಚಾರ ವಿಚಾರಗಳಲ್ಲಿ ಉತ್ತಮಳೂ ಆಗಿದ್ದಳು. ವಯಸ್ಸಿಗೆ ಬಂದಾಗ ಇವಳು ಮದುವೆಯನ್ನು ಮಾಡಿಕೊಳ್ಳಲಿಲ್ಲ. ಬದಲಾಗಿ ತನ್ನ ತಂದೆ ತಾಯಿಯರ ಅನುಮತಿ ಪಡೆದು ಹಿಮಾಲಯದ ಪರ್ವತಗಳ ಶಿಬಿರಗಳಲ್ಲಿ ತಪ್ಪಸ್ಸನ್ನು ಆಚರಿಸಲು ತೆರಳಿದಳು.

ಹೀಗಿರುವಾಗ ಒಮ್ಮೆ ಸಾಕ್ಷಾತ್ ಭಗವತಿಯು ಹಸುವಿನ ರೂಪವನ್ನು ಪಡೆದು, ಹಿಮಾಲಯ ಪರ್ವತಗಳಲ್ಲಿ ಸಂಚರಿಸುತ್ತಿದ್ದಳು. ಅದನ್ನು ನೋಡಿ ಕೇತಕಿಯು ಹಾಸ್ಯಮಾಡಿದಳು. ಹಸುವಿನ ರೂಪವನ್ನು ತ್ಯಜಿಸಿದ ಭಗವತಿಯು ತನ್ನ ಸ್ವಂತ ರೂಪವನ್ನು ಪಡೆದು ಕೋಪದಿಂದ,

"ಇನ್ನೂ ಕುಮಾರಿಯಾಗಿರುವ ಜಂಭ ನಿನಗೆ, ನಿನ್ನ ಗರ್ವಭಂಗ ಮಾಡುವುದಕ್ಕಾಗಿಯೇ ನಾನಿಲ್ಲಿಗೆ ಬಂದದ್ದು. ನೀನು ಭೂಮಿಯ ಮೇಲೆ ಹೆಣ್ಣಾಗಿ ಜನ್ಮವೆತ್ತಿ, ಐದು ಗಂಡಂದಿರ ಹೆಂಡತಿಯಾಗು" —ಎಂದು ಶಾಪ ನೀಡಿದಳು. ಇದನ್ನು ಆಲಿಸಿದ ಕೇತಕಿಯು ಭಯಭ್ರಾಂತಳಾದಳು. ಅವಳಿಗೆ ಆಗ ತನ್ನ ತಪ್ಪಿನ ಅರಿವಾಯಿತು. ದುಃಖಗೊಂಡವಳಾಗಿ, ಆರ್ತತೆಯಿಂದ ಭಗವತಿಯ ಪ್ರಾರ್ಥನೆ ಮಾಡಿದಳು. ಬಹಳಷ್ಟು ಸಮಯ ಪ್ರಾರ್ಥನೆ ಮಾಡಿದ ನಂತರ, ದಯಗೊಂಡ ಭಗವತಿಯು ಹೀಗೆಂದಳು,

"ಮಗಳೇ ಅಳಬೇಡ, ಸುಮ್ಮನಿರು!........ ನಾನು ನಿನಗೆ ಶಾಪವನ್ನು ನೀಡಿದರೂ, ನಿನ್ನ ಮುಖಾಂತರ ಭಗವಂತನು ಸಂಕಲ್ಪಿಸಿದ ಕಾರ್ಯವೊಂದು ಸಿದ್ಧಿಸುವುದು. ನೀನು ಆ ಪರಮಾತ್ಮನ ಪ್ರಿಯ ಸಖಿಯಾಗುವಿ. ಆದರಿಂದ ಪ್ರಸನ್ನ ಪೂರ್ಣಳಾಗಿ ಅವನ ಕಾರ್ಯವನ್ನು ನಿರ್ವಿಘ್ನ ಮಾಡಿಸಿಕೊಡು. ನಿನಗೆ ಐವರು ಗಂಡಂದಿರು ಇದ್ದರೂನು ನಿನ್ನ ಪತೀಧರ್ಮವು ಅಸ್ಖಲಿತವಾಗಿರುತ್ತದೆ. ಜಗತ್ತಿನಾದ್ಯಂತ ಸತೀಶಿರೋಮಣಿ ಎಂಬ ಹೆಸರು ಪಡೆದು, ಲೋಕ ಪೂಜಿತಳಾಗುವಿ.........ನಿನ್ನ ಯಶಸ್ಸು ಅಕ್ಷಯವಾಗಲಿ ನಿನ್ನ ಹೆಸರು ಪ್ರಾತಃ ಸ್ಮರಣೀಯವಾಗಲಿ......"

ಹೀಗೆಂದು ಅನುಗ್ರಹಿಸಿ, ಭಗವತಿಯು ಅಂತರ್ಧಾನಳಾದಳು. ಇದನ್ನು ಆಲಿಸಿದ ಕೇತಕಿಯ ಮನಸ್ಸು ಶಾಂತ ಗೊಂಡಿತು. ತಾನು ಅದುವರೆವಿಗೂ ಓಡಾಡಿಕೊಂಡಿದ್ದ ಪವಿತ್ರ ತಪೋಭೂಮಿಯನ್ನು ತ್ಯಜಿಸಿ, ಮರ್ತ್ಯಲೋಕಕ್ಕೆ ಹೋಗಬೇಕಾಗಿದೆಯಲ್ಲ ಎನ್ನುವುದಕ್ಕೆ ಅವಳಿಗೆ ಬಹಳ ದುಃಖ ಉಂಟಾಯಿತು. ಅಳುತ್ತ ಅವಳು ಅತ್ತಿತ್ತ ತಿರುಗಾಡ ತೊಡಗಿದಳು.

ಒಂದು ದಿನ ಅವಳು ಪವಿತ್ರ ಗಂಗಾನದಿಯನ್ನು ಪ್ರವೇಶಿಸಿದಳು. ಕೂಡಲೆ ದೇವಮಾಯೆಯು ತನ್ನ ಪ್ರಭಾವವನ್ನು ಬೀರಿತು: ಅದರ ಪರಿಣಾಮವಾಗಿ ಅವಳ ಅಶ್ರುಬಿಂದುಗಳೆಲ್ಲ ಬೇರೆಯಾಗಿ, ನೀರಿನ ಜೊತೆಯಲ್ಲಿ ಮಿಶ್ರವಾಗಿ, ಪ್ರತಿಯೊಂದು ಅಶ್ರುಬಿಂದುವೂ ದಿವ್ಯವಾದ ಸ್ವರ್ಣ ಕಮಲವಾಗತೊಡಗಿತು: ಆದರೆ ಈ ರೀತಿಯಲ್ಲಿ ಅಶ್ರುಬಿಂದುಗಳು ಸ್ವರ್ಣ ಕಮಲವಾಗಿ ಪರಿವರ್ತಿತವಾಗುತ್ತಿದ್ದ ವಿಚಾರ ಸ್ವತಃ ಕೇತಕಿಗೆ ತಿಳಿದಿರಲಿಲ್ಲ. ಮಂದಾಕಿನಿಯಾದ ಗಂಗೆಯಲ್ಲಿ ಆ ಸ್ವರ್ಣ ಕಮಲಗಳು ತೇಲುತ್ತಾ ಸ್ವರ್ಗದ ಕಡೆಗೆ ತೆರಳತೊಡಗಿದುವು.

ಯಮಧರ್ಮ, ವಾಯು ಹಾಗೂ ಅಶ್ವಿನೀ ಕುಮಾರ ದೇವತೆಗಳು ಇದನ್ನು ಕಂಡು ಆಶ್ಚರ್ಯಗೊಂಡರು. ಇವರೊಂದಿಗೆ ಇದ್ದ ಇಂದ್ರನೂ ಕೂಡ ಆ ಕಮಲಗಳನ್ನು ಕಂಡು ಬಹಳಷ್ಟು ಆಶ್ಚರ್ಯಗೊಂಡನು.

ಈ ರೀತಿಯ ಸೃಷ್ಟಿಯು ಹೇಗಾಯಿತೆಂಬುದು ಅವರಿಗೂ ಗೊತ್ತಾಗಲಿಲ್ಲ. ಆದುದರಿಂದ ಇದರ ಮೂಲವನ್ನು ಕಂಡು ಹಿಡಿಯ ಬೇಕೆಂದುಕೊಂಡರು.




ಮಧುರ ಸೌರಭದಿಂದ ಕೂಡಿ, ಸೌಂದರವೂ ಆಕರ್ಷಕವೂ ಆಗಿರುವ ಈ ಸ್ವರ್ಣ ಕಮಲಗಳ ಉಗಮಸ್ಥಾನವನ್ನು ಕಂಡು ಹಿಡಿಯಲು ಮೊದಲು ಯಮಧರ್ಮನು ಹೊರಟನು. ಬಹಳಷ್ಟು ಸಮಯವಾಯಿತು. ಅವನು ಹಿಂತಿರುಗಿ ಬರಲಿಲ್ಲ. ಆದುದರಿಂದ ಅವನನ್ನು ಹುಡುಕಿ ತರಲು ಹಾಗೂ ಸ್ವರ್ಣ ಕಮಲಗಳ ಉಗಮಸ್ಥಾನವನ್ನು ಕಂಡು ಹಿಡಿಯಲು ವಾಯುದೇವನೂ ಅಶ್ವಿನೀಕುಮಾರರೂ ಹೊರಟರು.

ಆದರೆ ಇವರಲ್ಲಿ ಯಾರು ಹಿಂತಿರುಗಿ ಬರಲಿಲ್ಲ. ಇದನ್ನು ಗಮನಿಸಿದ ಇಂದ್ರನು ಆಶ್ಚರ್ಯಗೊಂಡನು. ಆದರಿಂದ ಸ್ವತಃ ದೇವರಾಜ ಇಂದ್ರನೇ ಅನ್ವೇಷಿಸಲು ಹೊರಟ.

ಮುಂದುವರೆದು ಹುಡುಕುತ್ತಾ ಹೊರಟ ಇಂದ್ರನು ಕೇತಕಿಯು ಮಂದಾಕಿನಿಯ ಬಳಿ ನಿಂತಿದ್ದ ಸ್ಥಳವನ್ನು ತಲುಪಿದ. ಅವಳನ್ನು ನೋಡಿದ ಇಂದ್ರನು, ಅವಳು ಯಾರೆಂಬುದು ಗೊತ್ತಾಗದೆ ಅವಳ ಪರಿಚಯವನ್ನು ಕೇಳಿದ.

ತಾನು ಯಾರು ಎಂಬುದನ್ನು ಅವಳು ತಿಳಿಸಿದಳು. ಅಂತೆಯೆ ಅವಳ ಸೌಂದರ್ಯವು ಅವನನ್ನು ಮೋಹಗೊಳಿಸಿತು. ಕೂಡಲೆ ತನ್ನನ್ನು ಮದುವೆಯಾಗುವಂತೆ ಅವನು ಅವಳನ್ನು ಕೇಳಿದ.

ದೇವರಾಜ ಇಂದ್ರನ ಈ ಮಾತುಗಳನ್ನು ಆಲಿಸಿ ಕೇತಕಿಗೆ ಬಹಳ ವ್ಯಥೆಯಾಯಿತು. ಹೇಳಿದಳು

"ದೇವರಾಜ! ನಾನು ಜನ್ಮತಃ ತಪಸ್ವಿನಿಯಾಗಿದ್ದೇನೆ ಭಗವಾನ್ ಶಂಕರನ ಕೃಪೆ ನನ್ನ ಮೇಲೆ ಇದೆ. ಅವನ ಚರಣಗಳನ್ನೇ ನಾನೂ ನಂಬಿದ್ದೇನೆ. ನನ್ನನ್ನು ಮದುವೆ ಮಾಡಿಕೊಳ್ಳುವುದಾಗಿ ತಿಳಿಸಿದ ಇದುವರೆವಿಗೆ ಇಲ್ಲಿಗೆ ಬಂದ ನಾಲ್ವರು ದೇವ ಪುರುಷರೂ ಕಠೋರ ಶಿಕ್ಷೆಯನ್ನು ಅನುಭವಿಸುತ್ತಿದ್ದಾರೆ. ಅಂತಹುದೇ ಕಠಿಣ ಶಿಕ್ಷೆಯನ್ನು ನೀನು ಅನುಭವಿಸ ಬೇಕೆಂಬ ಆಸೆ ಇದೆಯೇನು? ನೀನು ದೇವರಾಜನೆ ಆಗಿರು, ಬೇರೆ ಯಾರೇ ಆಗಿರು, ನನಗೆ ಅದರ ಲಕ್ಷ್ಯವೇನೂ ಇಲ್ಲ........"

ಕೇತಕಿಯ ಮಾತುಗಳನ್ನು ಆಲಿಸಿದ ಇಂದ್ರನು ಮತ್ತಷ್ಟು ಕುತೂಹಲಗೊಂಡನು. ಅವನು

ಅಹಲ್ಯಾ ದ್ರೌಪದೀ ತಾರಾ
ತಾರಾ ಮಂಡೋದರೀ ತಥಾ
ಪಂಚ ಕನ್ಯಾ ಸ್ಮರೇನ್ನಿತ್ಯಂ
ಮಹಾಪಾತಕ ನಾಶನಂ

—ಅಹಲ್ಯೆ, ದ್ರೌಪದೀ, ತಾರೆ, (ಸುಗ್ರೀವ ಪತ್ನಿ) ತಾರೆ, (ಬೃಹಸ್ಪತಿ ಪತ್ನಿ) ಮಂಡೋದರಿ ಈ ಐವರನ್ನು ಪ್ರತಿದಿನ ಸ್ಮರಿಸುವುದರಿಂದ ಮಹಾಪಾತಕ ನಾಶವಾಗುತ್ತದೆ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| | (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| | ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | |
| | (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ | ರಾತ್ರಿ 7–00 ರಿಂದ 8–00 | — |
| (ಮುಕುರ ಮಂಟಪದಲ್ಲಿ) | (ಶುಲ್ಕ ರೂ 150/-) | |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ –00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

ಪೇಷ್ಕಾರ್.

ನಿರ್ಭಯತೆಯಿಂದ ತನ್ನನ್ನು ಮದುವೆಯಾಗುವಂತೆ ತಿಳಿಸಿ ಆ ಮೊದಲು ಬಂದ ನಾಲ್ವರು ದೇವತೆಗಳ ಗತಿ ಏನಾಯಿತೆಂದು ವಿಚಾರಿಸಿದ.

'ಅವರನ್ನು ನೋಡ ಬೇಕಾ? ಹಾಗಿದ್ದರೆ ನಡಿ!'

ಎಂದು ಕೇತಕಿಯು ಇಂದ್ರನನ್ನು ಹಿಮಾಲಯದ ಪರ್ವತಗಳ ಮೇಲೆ ಕರೆದೊಯ್ದಳು. ಒಂದು ಶಿಖರಾಗ್ರದಲ್ಲಿ ಯೋಗಿಯೋರ್ವನು ಸಮಾಧಿಸ್ಥನಾಗಿದ್ದನು. ದೂರದಿಂದಲೇ ಕೇತಕಿಯು ಆತನನ್ನು ತೋರಿಸುತ್ತಾ ಇಂದ್ರನಿಗೆ ಹೇಳಿದಳು–

"ಆ ಮಹಾತ್ಮನನ್ನು ಕೇಳು ನಿನ್ನ ದೇವತೆಗಳು ಏನಾದರೆಂಬುದನ್ನು ತಿಳಿಸುವನು"

ಇಂದ್ರನು ಆ ಯೋಗಿಯ ಬಳಿಗೆ ಹೋದ ತನ್ನೊಂದಿಗೆ ಬಂದ ಯಮ, ವಾಯು ಹಾಗೂ ಅಶ್ವಿನಿ ಕುಮಾರರು ಏನಾದರೆಂದು ಕೇಳಿದ. ಆದರೆ ಸಮಾಧಿಸ್ಥನಾಗಿದ್ದ ಆ ಯೋಗಿಯು ಯಾವ ಉತ್ತರವನ್ನೂ ನೀಡಲಿಲ್ಲ.

ಇದರಿಂದ ಕೋಪಗೊಂಡ ಇಂದ್ರನು ಕೆಲವು ಕುವಾಚ್ಯ ಮಾತುಗಳನ್ನು ಹೇಳಿದ. ಪರಿಣಾಮ– ಮಹಾತ್ಮನ ಸಮಾಧಿಯು ಭಂಗವಾಯಿತು. ನೋಡ ನೋಡುತ್ತ ಆ ಮಹಾತ್ಮನು ಮಹಾನ್ ಯೋಗೀಶ್ವರ ತ್ರಿಶೂಲಧಾರಿ ಭಗವಾನ್ ರುದ್ರನ ರೂಪವನ್ನು ಪಡೆದು ಗರ್ಜಿಸುವ ದನಿಯಲ್ಲಿ ಹೇಳಿದ

"ನೀವುಗಳು ಒಬ್ಬರಾಗುತ್ತಲೊಬ್ಬರು ಸಲ ಸಲಕ್ಕೂ ಬಂದು ನನ್ನ ಆಶ್ರಿತಳೂ, ಆಜೀವ ಬ್ರಹ್ಮಚಾರಿಣಿಯೂ, ತಪಸ್ವಿನಿಯೂ ಆದ ಆ ದೇವಿಗೆ ಏಕೆ, ಅನಗತ್ಯವಾದ ತೊಂದರೆಯನ್ನು ಕೊಡುವಿರಿ? ಹೋಗು, ಮೊದಲಿನ ನಾಲ್ವರಿಗೆ ಯಾವ ಶಿಕ್ಷೆಯನ್ನು ನೀಡಲಾಗಿದೆಯೊ ಅದೇ ಶಿಕ್ಷೆಯನ್ನು ನಿನಗೂ ನೀಡಲಾಗುವುದು! ಹೋಗು ಅನುಭವಿಸು!"

ಹೀಗೆಂದು ಹೇಳಿದ ಮಹಾದೇವನು ಅಂಧಕಾರ ಮಯವಾದ ಗುಹೆಯ ಎದುರುಗಡೆ ಇಂದ್ರನನ್ನು ಕರೆದುಕೊಂಡು ಹೋದ. ಅದನ್ನು ನೋಡಿದ ಕೂಡಲೇ ಇಂದ್ರನು ಗಡಗಡನೆ ನಡುಗ ತೊಡಗಿದ. ಅಲ್ಲಿ ಯಮ, ವಾಯು, ಅಶ್ವಿನೀ ಕುಮಾರರನ್ನು ಕೈಕಾಲುಗಳನ್ನು ಬಿಗಿದು, ಬಿಸಿಗೊಂಡ ಚೂಪುಗಲ್ಲುಗಳ ಮೇಲೆ ಉರುಳಿಸಲಾಗಿದೆ. ಭಯಾನಕ ನೋವಿನಿಂದ ತತ್ತರಿಸುತ್ತಿದ್ದಾರೆ. ಅವರ ದುರವಸ್ಥೆಯನ್ನು ನೋಡಿ ಭಯಗೊಂಡು, ಭಗವಾನ್ ಶಂಕರನ ಚರಣಗಳ ಮೇಲೆ ಬಿದ್ದು ಕೈ ಜೋಡಿಸಿ ಆತನನ್ನು ಶ್ರದ್ಧಾ ಭಕ್ತಿಗಳಿಂದ ಸ್ತುತಿಸಿದನು.

ಇದರಿಂದ ಪ್ರಸನ್ನನಾದ ಪರಮೇಶ್ವರನು ಅವರುಗಳ ಅಪರಾಧವನ್ನು ಕ್ಷಮಿಸಿ, ಅವರುಗ

ಳಿಗೆ ಪುನಃ ದೈವತ್ತ್ವವನ್ನು ಕರುಣಿಸಿದನು. ಇದರ ಪರಿಣಾಮವಾಗಿ ಆ ಐದೂ ಜನ ತಮ್ಮ ಮೊದಲಿನ ರೂಪವನ್ನು ಪಡೆದರು.

ನಂತರ ಈಶ್ವರನು ಆ ಐವರನ್ನೂ, ಮಹಾವಿಷ್ಣುವಿನ ಬಳಿಗೆ ಕರೆದೊಯ್ದು, ಅದುವರೆವಿಗೂ ನಡೆದ ವಿಚಾರವನ್ನೆಲ್ಲ ತಿಳಿಸಿದನು

ಅದನ್ನು ಆಲಿಸಿದ ಮಹಾವಿಷ್ಣುವು ಹೇಳಿದ, "ನೀವು ಸ್ವರ್ಗದ ದೇವತೆಗಳಾಗಿಯೂ ಕೂಡ ಇಂದ್ರಿಯಗಳ ಲೋಭಗಳಿಗೆ ದಾಸರಾಗಿ, ಅವುಗಳ ದಾಸರಾದಿರಿ. ಇದು ನಿಮ್ಮಂತಹ ಇಂದ್ರತ್ವವನ್ನು ಪಡೆದ ದೇವತೆಗಳಿಗೆ ಅಪಮಾನ ಕರವಾದುದು. ನೀವು ಸಾಮಾನ್ಯ ಮಾನವರಂತೆ ನಡೆದುಕೊಂಡಿರಿ. ಆದುದರಿಂದ ನೀವು ಮರ್ತ್ಯ ಲೋಕಕ್ಕೆ ಹೋಗಿ, ಮನುಷ್ಯ ದೇಹವನ್ನು ಧರಿಸಲೇಬೇಕು. ನೀವು ಐದು ಜನವೂ ಭೂಲೋಕದಲ್ಲಿ ಜನಿಸಿದ ನಂತರ, ಭಗವತಿಯು ಮಾತಿನಂತೆ ಮುಂದಿನ ಜನ್ಮದಲ್ಲಿ ಈ ಕೇತಕಿಯು ನಿಮ್ಮ ಐವರ ಧರ್ಮ ಪತ್ನಿಯಾಗುವಳು. ಜಗತ್ ಕಲ್ಯಾಣಕ್ಕಾಗಿ ಈ ಕಾರ್ಯದ ಅವಶ್ಯಕತೆ ಇದೆ. ಇದರ ಸಿದ್ಧಿಗಾಗಿ ನಾನು ನಿಮ್ಮೊಂದಿಗೆ ಭೂಮಿಯ ಮೇಲೆ ದ್ವಾಪರಯುಗದಲ್ಲಿ ಅವತರಿಸುತ್ತೇನೆ........"

ಎಂದು ಹೇಳಿದ ಮೇಲೆ ಅವರೆಲ್ಲರೂ ತಮ್ಮ ಲೋಕಗಳಿಗೆ ಹಿಂತಿರುಗಿದರು,

ಆ ಜೀವನ ಬ್ರಹ್ಮಚರ್ಯ ವ್ರತವನ್ನು ಪಾಲಿಸಿದ, ಮಹಾನ್ ಸತೀ, ದಕ್ಷರಾಜ ಕನ್ಯೆಯಾದ ಈ ಕೇತಕಿಯು ಪರಮಾತ್ಮನ ಸತ್ಕಾರ್ಯಕ್ಕಾಗಿ ಭಗವತಿಯ ಶಾಪವನ್ನು ನಿಮಿತ್ತ ಮಾಡಿಕೊಂಡು ಮಹಾರಾಜ ದ್ರುಪದನ ಯಜ್ಞಕುಂಡದಿಂದ ಕನ್ಯೆಯ ರೂಪದಲ್ಲಿ ಪ್ರಕಟಗೊಂಡಳು.

ಇದೇ ರೀತಿಯಲ್ಲಿ ಇಂದ್ರ, ಯಮ, ವಾಯು. ದೇವತೆಗಳು ಕುಂತಿಯ ಗರ್ಭದಲ್ಲೂ ಅಶ್ವಿನಿ ಕುಮಾರರು ಮಾದ್ರಿಯ ಗರ್ಭದಲ್ಲೂ ಜನಿಸಿ, ಮುಂದೆ ಇದೇ ದ್ರೌಪದಿಯ ಪಾಣಿಗ್ರಹಣ ಮಾಡಿಕೊಂಡರು.

ಪೂರ್ವ ಜನ್ಮದ ಮಹಾನ್ ತಪಸ್ಸಿನ ಫಲಸ್ವರೂಪ ದಿಂದಲೇ ದ್ರೌಪತಿಯು ಭಗವಾನ್ ಶ್ರೀಕೃಷ್ಣನ ಸಖಿಯಾಗಿ, ತಂಗಿಯಾಗಿ ಮಹಾನ್ ಪತಿವ್ರತೆಯ ಆದರ್ಶವನ್ನು ಎತ್ತಿ ಹಿಡಿದಳು.

ಎಷ್ಟೇ ತಪಸ್ಸು ಮಾಡಿದರೂ 'ಅಹಂ' ಎನ್ನುವ ಒಂದು ದೋಷದಿಂದ ಹೀಗೆ ಮುಂದಿನ ಜನ್ಮದಲ್ಲಿ ಐವರ ಪತ್ನಿಯಾಗಬೇಕಾಯಿತು, ಎಂಬುದನ್ನು ಲೋಕಜನಿತ ಮಾಡುವುದಕ್ಕಾಗಿಯೋ ಎಂಬಂತೆ ಕೇತಕೀದೇವಿಯ ಜನ್ಮವೃತ್ತಾಂತ ಇರುವಂತಿದೆ.

ಒಂದು ಸಣ್ಣ ಲೋಪವು ವ್ಯಕ್ತಿಯೊಬ್ಬನ ಭವ್ಯ ಜೀವನವನ್ನು ಹೀಗೆ ಛಿದ್ರಗೊಳಿಸಬಲ್ಲದು ಎಂಬುದಕ್ಕೆ ಕೇತಕೀ ದೇವಿಯು ಉತ್ತಮ ಉದಾಹರಣೆಯಾಗಿದ್ದಾಳೆ.

(ಆಧಾರಗಳಿಂದ)

'ರಘುಸುತ'

## ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೇಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೇಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೇಂಕಟೇಶ್ವರ ನಿತ್ಯ ಅನ್ನದಾನ ಯೋಜನೆ'ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ಯಾತ್ರಿಕರಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.
* ಒಂದು ಕುಟುಂಬದ ಐದು ಮಂದಿ ಅಥವಾ ಎರಡು ಸಂಸ್ಥೆಗಳೂ ಸೇರಿ ದತ್ತಿಯ ಹಣವನ್ನು ನೀಡಬಹುದು.
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್, ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಭಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

# ವಾರ್ತಾವಳಿ

## ತಿರುಮಲೆಯಲ್ಲಿ ಭಾರತ ಉಪರಾಷ್ಟ್ರಪತಿ



ಸತೀ ಸಹಿತರಾದ ಉಪರಾಷ್ಟ್ರಪತಿ; ತಿರುಮಲೆಯಲ್ಲಿ.

ಭಾರತದ ಉಪರಾಷ್ಟ್ರಪತಿ ಶ್ರೀ ಡಾ॥ ಶಂಕರ ದಯಾಳ ಶರ್ಮ ಅವರು ಗತ ಡಿಸೆಂಬರಿನಲ್ಲಿ ತಿರುಮಲೆಗೆ ಆಗಮಿಸಿದ್ದರು. ಗುರುವಾರ ದಿನಾಂಕ 24 ರಂದು ಉಪರಾಷ್ಟ್ರಪತಿ ತಮ್ಮ ಪತ್ನಿ ಹಾಗೂ ಇಬ್ಬರು ಪೌತ್ರಿಯರೊಂದಿಗೆ ತಿರುಚಾನೂರು ಪದ್ಮಾವತಿ ಆಲಯವನ್ನು ಸಂದರ್ಶಿಸಿ ಅಮ್ಮನವರಿಗೆ ಪ್ರತ್ಯೇಕ ಪೂಜೆಯನ್ನು ಸಮರ್ಪಿಸಿದರು. ಆಂಧ್ರ ಪ್ರದೇಶ ಅರಣ್ಯ ಇಲಾಖಾಮಂತ್ರಿ ಶ್ರೀ ಗಾಲಿ ಮುದ್ದು ಕೃಷ್ಣಮನಾಯುಡು, ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ, ತಿ. ತಿ. ದೇ. ಬೋರ್ಡ್ ಸದಸ್ಯರು, ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಮತ್ತಿತರ ಅಧಿಕಾರಿಗಳು ಉಪರಾಷ್ಟ್ರಪತಿಗಳಿಗೆ ಆಲಯ ಮರ್ಯಾದೆಯಂತೆ ಸ್ವಾಗತವನ್ನು ಬಯಸಿದರು. ಶ್ರೀಪದ್ಮಾವತೀ ಅಮ್ಮನವರ ದರ್ಶನಾಂತರ ತಿರುಮಲೆಯನ್ನು ಸೇರಿದ ಅವರನ್ನು ಶ್ರೀ ಸೀತಾರಾಮಯ್ಯ, ಶ್ರೀ ವೆಂಕಟಪತಿ ರಾಜು ಮತ್ತಿತರ ಅಧಿಕಾರಿಗಳು ಸ್ವಾಗತಿಸಿದರು. ಡಾ॥ ಶಂಕರದಯಾಳಶರ್ಮ ದಂಪತಿಗಳು 25 ರ ಶುಕ್ರವಾರ ಬೆಳಗ್ಗೆ ಶ್ರೀ ವೆಂಕಟೇಶ್ವರಸ್ವಾಮಿಯ ಅಭಿಷೇಕದಲ್ಲಿ ಪಾಲಗೊಂಡು ಸ್ವಾಮಿಯನ್ನು ಆರಾಧಿಸಿದರು. ತಿರುಮಲೆಯ ದೇವಾಲಯದಲ್ಲಿ ಹೊಸದಾಗಿ ಜೀರ್ಣೋದ್ಧಾರ ಹೊಂದಿದ ಮುಕುರ ಮಂಟಪವನ್ನು ದರ್ಶಿಸಿದ ನಂತರ ವೇದ ಪಂಡಿತರು ಉಪರಾಷ್ಟ್ರಪತಿ ದಂಪತಿಗಳನ್ನು ವೇದೋಪಚಾರದಂತೆ ಆಶೀರ್ವದಿಸಿರು. ನಂತರ ಸ್ವಾಮಿ ಪ್ರಸಾದವನ್ನು ಅವರಿಗೆ ನೀಡಲಾಯಿತು.

## ತಿರುಪತಿಯಲ್ಲಿ ಪುರಂದರ ದಾಸೋತ್ಸವ

ತಿ. ತಿ. ದೇವಸ್ಥಾನಗಳ ದಾ ಸ ಸಾ ಹಿ ತ್ಯ ಪ್ರಾಜೆಕ್ಟ್ 1987 ಡಿಸೆಂಬರ್ 18, 19, 20 ರಂದು ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಸಡಗರ ಸಂಭ್ರಮಗಳಿಂದ ಪುರಂದರ ದಾಸೋತ್ಸವವನ್ನು ಆಚರಿಸಿ, ಕನ್ನಡ ಹರಿದಾಸ ಸಾಹಿತ್ಯದ ಹಿರಿಮೆ, ವೈಶಾಲ್ಯಗಳ, ಮಾನವೀಯ ಮೌಲ್ಯಗಳು, ಆಧ್ಯಾತ್ಮಿಕ ತತ್ತ್ವಗಳ, ಪ್ರಚಾರ ಮಾಡುವಲ್ಲಿ ಯಶಸ್ವಿಯಾಯಿತು.

ಭಕ್ತಿ ಮಾರ್ಗವನ್ನು ಪ್ರಚಾರ ಮಾಡುತ್ತ ಭಾಷೆಗೆ ಹೊಸತನವನ್ನು ತಂದು ಕೊಟ್ಟು, ಸನಾತನ ವೇದಾಂತವನ್ನು ಸಾಮಾನ್ಯ ಜನತೆಯ ಹತ್ತಿರಕ್ಕೆ ತಂದ ಹರಿದಾಸರು ಯಾವ ಪ್ರಾಂತಕ್ಕೆ ಸೇರಿದರೂ, ಅವರೆಲ್ಲ ತಿರುಮಲೆ–ತಿರುಪತಿ ದೇವಸ್ಥಾನಗಳಿಗೆ ಮಾನ್ಯರು, ಆದರಣೀಯರು ಎಂದು ಆರಂಭೋತ್ಸವದ ಅಧ್ಯಕ್ಷತೆವಹಿಸಿದ ತಿ. ತಿ. ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು ತಿಳಿಸಿದರು. ಉತ್ಸವದ

(ಮುಂದಿನ ಪುಟ ನೋಡಿ)



ಸಂಗೀತಸಭೆಯಲ್ಲಿ ಶ್ರೀ ಟಿ.ಕೆ. ಗೋವಿಂದರಾವ್

ಆರಂಭಕ್ಕೆ ಅವರು ಧರ್ಮಧ್ವಜ ಹಾರಾಡಿಸಿ, ದಾಸಸಾಹಿತ್ಯ ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ನಂತರ ಏರ್ಪಾಡಾದ ಸಭೆಯಲ್ಲಿ ಮಾತನಾಡುತ್ತ ಹರಿದಾಸರ ಭಕ್ತಿ ಭಾವೈಕ್ಯವನ್ನು ಕುರಿತು ವಿವರಿಸುತ್ತಿದ್ದರು. ಮುಖ್ಯ ಅತಿಥಿಯಾಗಿ ಭಾಗವಹಿಸಿದ ಪೌರಸಂಬಂಧ ಶಾಖಾಧಿಕಾರಿ ಡಾ॥ ರಾವುಲ ಸೂರ್ಯನಾರಾಯಣ ಮೂರ್ತಿಯವರು—ಗ್ರಂಥ ಪ್ರಕಟಣೆ, ಧ್ವನಿ ಸುರಳಿ ಪ್ರಸಾರ ವಸ್ತು ಪ್ರದರ್ಶನಗಳ ಮೂಲಕ ಕರ್ನಾಟಕ ಹರಿದಾಸರ ಸಾಹಿತ್ಯ ಪ್ರಸಾರ ಮಾಡುವುದರೊಂದಿಗೇ ಆಯಾ ಹರಿದಾಸರ ಹುಟ್ಟಿದೂರು, ಆರಾಧ್ಯ ಸ್ಥಳಗಳಲ್ಲಿ ಸೂಕ್ತವಾದ ರೀತಿಯ ಕೆಲಸಗಳನ್ನು ಕೈಗೆತ್ತಿ ಕೊಳ್ಳಬೇಕಾದ ಅಗತ್ಯವನ್ನು ಅವಧಾರಿಸಿದರು.

ತಿ. ತಿ. ದೇ. ಭದ್ರತಾ ಅಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಅವರು ಸ್ವಾಗತ ಉಪನ್ಯಾಸದಲ್ಲಿ ಹರಿದಾಸ ಸಾಹಿತ್ಯವನ್ನು ಕುರಿತು ವಿವರಿಸಿದರು. ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ದಾಸಸಾಹಿತ್ಯ ಪರಿಚಯ ನೀಡಿ, ಪ್ರಾಜೆಕ್ಟ್ ಕಾರ್ಯ ಕಲಾಪಗಳನ್ನೂ ವಿವರಿಸಿದರು.



ಶ್ರೀಮತಿ ರಾಧಾ ಹಾಗೂ ಶ್ರೀಮತಿ ಜಯಲಕ್ಷ್ಮಿ ಅವರ ಗಾನ

ಪ್ರಾಜೆಕ್ಟ್ ಪ್ರಕಟಿಸಿದ ಪ್ರಸನ್ನ ವೆಂಕಟದಾಸರ ಕೀರ್ತನೆಗಳ ವಿವರಣೆ ವ್ಯಾಖ್ಯಾನದ ತೆಲುಗು ಅನುವಾದ (ಶ್ರೀ ವಿ. ಸೂರ್ಯನಾರಾಯಣ ರಾವ್) ಪುಸ್ತಕವನ್ನು ಶ್ರೀ ಎನ್ ರಮೇಶ ಕುಮಾರ್ ಬಿಡುಗಡೆ ಮಾಡಿದರು. ಹರಿದಾಸರ ಸಂಕೀರ್ತನೆಗಳ ಧ್ವನಿಸುರಳಿ-ಹರಿದಾಸ ಗಾನಸುಧೆ (ಶ್ರೀ ಜಿ ಬಾಲಕೃಷ್ಣ ಪ್ರಸಾದ್)ಯನ್ನು ಶ್ರೀ ಎಸ್. ಕೆ. ಜಯಚಂದ್ರ ಬಿಡುಗಡೆ ಮಾಡಿದರು.

ಖ್ಯಾತ ಸಂಗೀತ ವಿದ್ವಾಂಸ ಶ್ರೀ ಟಿ. ಕೆ. ಗೋವಿಂದರಾವ್ ಅವರು ಕರ್ನಾಟಕ ಹರಿದಾಸರ ಕೀರ್ತನೆಗಳನ್ನು ಮಧುರವಾಗಿ ಗಾನ ಮಾಡಿದರು. ಪ್ರಮುಖ ವಿದುಷೀಮಣಿಯರು ಶ್ರೀಮತಿ ರಾಧಾ ಜಯಲಕ್ಷ್ಮಿ ಅವರುಗಳ ಸಂಗೀತ ಕಚೇರಿಯೊಂದಿಗೆ ಮೊದಲ ದಿನದ ಕಾರ್ಯಕ್ರಮವು ಮುಗಿಯಿತು.

ಎರಡನೆಯ ದಿನ ಶ್ರೀವೆಂಕಟೇಶ್ವರ ವಿಶ್ವವಿದ್ಯಾನಿಲಯದ ತೆಲುಗು ವಿಭಾಗಾಧ್ಯಕ್ಷ ಡಾ॥ ಕೆ. ಸರ್ವೋತ್ತಮನ್ ಅವರು—ಪುರಂದರ ದಾಸರ ಪದಗಳಲ್ಲಿ ಪವಮಾನ—ಉಪನ್ಯಾಸವನ್ನು ನೀಡಿದರು. ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರ ಅಧ್ಯಕ್ಷತೆಯಲ್ಲಿ ನಡೆದಸಭೆಯಲ್ಲಿ ತಿ. ತಿ. ದೇ. ಸದಸ್ಯ ಡಾ॥ ಎನ್. ದೇವನಾಥನ್ ಅವರು ಭಕ್ತಿಯ ಅಗತ್ಯವನ್ನು ಕುರಿತು ವಿವರಿಸಿದರು.

ವಸ್ತು ಪ್ರದರ್ಶನದ ಮೂಲಕ ಹರಿದಾಸ ತತ್ತ್ವವನ್ನು ಪ್ರಸಾರ ಮಾಡುತ್ತಿರುವ ತಿ ತಿ.ದೇ. ದಾಸ ಸಾಹಿತ್ಯ ಪ್ರಾಜೆಕ್ಟಿನ ಕೆಲಸ ಶ್ಲಾಘನೀಯವಾಗಿದೆಯೆಂದು ಹೇಳಿದ ತಿ.ತಿ.ದೇ. ಬೋರ್ಡ್ ಸದಸ್ಯ ಶ್ರೀ ಐ. ಎಲ್. ಎನ್. ಶಾಸ್ತ್ರಿಯವರು ವೇದಾಂತಿಗಳ ಬೋಧೆಯನ್ನು ನಿತ್ಯ ಜೀವನದಲ್ಲಿ ಅಳವಡಿಸಿ ಕೊಳ್ಳ ಬೇಕಾದ ಅಗತ್ಯವನ್ನು ಮನಗಾಣಿಸಿದರು.

ಭಕ್ತಿ ಸಾಹಿತ್ಯವನ್ನು ಪ್ರಚಾರ ಮಾಡುತ್ತಿರುವ ಪ್ರಾಜೆಕ್ಟ್ ಈಗಾಗಲೇ ಬೊಂಬಾಯಿ, ಹೈದರಾಬಾದ್, ಬೆಂಗಳೂರು ಪೂನಾ, ವಿಶಾಖ ಪಟ್ಟಣಗಳಲ್ಲಿ ಕಾರ್ಯಕ್ರಮಗಳನ್ನು ನೀಡಿದೆಯೆಂದೂ ದೆಹಲಿಯಲ್ಲೂ ಕಾರ್ಯಕ್ರಮ ನೀಡಬಹುದೆಂದೂ ವಿವರಿಸಿದ ಶ್ರೀ ಎನ್. ರಮೇಶಕುಮಾರ್ ಅವರು ಮುಖ್ಯ ಅತಿಥಿಗಳನ್ನೂ ಉಪನ್ಯಾಸಕರನ್ನೂ ಜ್ಞಾಪಿಕೆಗಳನ್ನಿತ್ತು ಸತ್ಕರಿಸಿದರು.

ಡಾ॥ ದೇವನಾಥನ್ ಅವರು ಭಕ್ತ ಪುರಂದರ ದಾಸ ಕನ್ನಡ ನಾಟಕವನ್ನು, ಶ್ರೀ ಐ ಎಲ್. ಎನ್. ಶಾಸ್ತ್ರಿಯವರು ಪುರಂದರ ದಾಸರ ಸಂಕೀರ್ತನೆಗಳ ಧ್ವನಿ ಸುರಳಿಯನ್ನು (ಶ್ರೀಮತಿ ಚಾರುಮತಿ ರಾಮಚಂದ್ರನ್) ಬಿಡುಗಡೆ ಮಾಡಿದರು.



ಶ್ರೀಮತಿ ಚಾರುಮತಿ ರಾಮಚಂದ್ರನ್ ಅವರ ಸಂಗೀತ

ನಂತರ ಶ್ರೀಮತಿ ಚಾರುಮತಿ ರಾಮಚಂದ್ರನ್, ಶ್ರೀ ತಿರುಚೂರು ರಾಮಚಂದ್ರನ್ ಅವರುಗಳು ಹರಿದಾಸರ ಕೃತಿಗಳ ಸಂಗೀತದ ಸಭೆಯನ್ನು ನಿರ್ವಹಿಸಿದರು. ಖ್ಯಾತ ಪ್ರಭಾತಕಲಾವಿದರು ಹರಿದಾಸ ವೈಭವ ನೃತ್ಯ ರೂಪಕ ಎಲ್ಲರನ್ನೂ ಆಕರ್ಷಿಸಿತು.

ಮೂರನೆಯ ದಿನ ಖ್ಯಾತ ತೆಲುಗು ಕವಿ ಶ್ರೀ ಬಾಪು ರೆಡ್ಡಿ ಯವರ ಅಧ್ಯಕ್ಷತೆಯಲ್ಲಿ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿಯವರು ತಾಳ್ಲಪಾಕ ಅನ್ನಮಾಚಾರ್ಯರಿಗೂ ಕನ್ನಡದ ಹರಿದಾಸರಿಗೂ ಇದ್ದ ಸಂಬಂಧವನ್ನು ವಿವರಿಸಿದರು.

ಭಕ್ತಿಯನ್ನು ಅಭಿವ್ಯಕ್ತಿಸುವ ಭಾಷೆಯಾವುದಾದರೂ ಫಲ ಒಂದೇ ಎಂದು ತಮ್ಮ ಅಧ್ಯಕ್ಷ ಭಾಷಣದಲ್ಲಿ ಶ್ರೀ ಬಾಪು ರೆಡ್ಡಿ ಯವರು ವಿವರಿಸುತ್ತ, ಅನ್ನ ದೇಹಕ್ಕೆ ಎಂತೋ ಅಂತೆ ಭಕ್ತಿ ಮನಕ್ಕೆ ಎಂದು ತಿಳಿಸಿದರು. ಮುಖ್ಯ ಅತಿಥಿಯಾಗಿ ಆಗಮಿಸಿದ್ದ ತಿ. ತಿ. ದೇ. ಬೋರ್ಡ್ ಅಧ್ಯಕ್ಷರಾದ ಶ್ರೀ ದೇವಿನೇನಿ ಸೀತಾರಾಮಯ್ಯನವರು ಪುರಂದರದಾಸರ ಸಾಹಿತ್ಯದ ವೈಶಿಷ್ಟ್ಯವನ್ನು ದೀರ್ಘವಾಗಿ ವಿವರಿಸಿ, ಇಂತಹ ಹಿರಿಯರ ಸಾಹಿತ್ಯ ಪ್ರಸಾರದಲ್ಲಿ ತಿ. ತಿ. ದೇ. ಇನ್ನೂ ಹೆಚ್ಚು ಕೆಲಸ ಮಾಡಲಿದೆಯೆಂದು ಭರವಸೆ ನೀಡಿದರು.

ಶ್ರೀ ದೇವಿನೇನಿ ಸೀತಾರಾಮಯ್ಯನವರು ಸಂಕೀರ್ತನೆಗಳ ಕ್ಯಾಸೆಟ್‌ಅನ್ನೂ ಶ್ರೀ ಬಾಪುರೆಡ್ಡಿಯವರು ಭಕ್ತ ಪುರಂದರದಾಸ ತೆಲುಗು ನಾಟಕವನ್ನೂ ಬಿಡುಗಡೆ ಮಾಡಿದರು.

ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಮೇಡಸಾನಿ ಮೋಹನ್ ಅವರು ಸ್ವಾಗತಿಸಿದ ಸಭೆಯನ್ನು ಶ್ರೀ ಕೆ. ಅಪ್ಪಣ್ಣಾಚಾರ್ಯರು ವಂದಿಸಿದರು.

ಸ್ವಾಮಿಜೀ ಪಾರ್ವತೀಕರ್ ಅವರಿಂದ ದತ್ತಾತ್ರೇಯ ವೀಣಾವಾದನ ಸಭೆ ವೀಣೆ, ಗೋಟುವಾದ್ಯ ಜಲತರಂಗಿಣಿಗಳ ನಾದ ಮಾಧುರ್ಯವನ್ನು ವೀಣೆಯೊಂದರಲ್ಲೇ ಮಿಡಿಸಿ – ಶ್ರೋತೃಗಳನ್ನು ಆಕರ್ಷಿಸಿತು. ನಂತರ ಪ್ರಭಾತಕಲಾವಿದರಿಂದ ಶ್ರೀ ಕೃಷ್ಣ ವೈಜಯಂತಿ ನೃತ್ಯರೂಪಕ ಅದ್ಭುತವಾಗಿದ್ದಿತು.

ಸೃಷ್ಟಿಯನ್ನು (ದಾಸಸಾಹಿತ್ಯದಂತೆ) ಚಿತ್ರಗಳ ಮೂಲಕ ವಿವರಿಸುವ ಹರಿದಾಸ ಸಾಹಿತ್ಯದ ಪರಿಕರಗಳ ಚಿತ್ರಗಳ ಚಿತ್ರಪ್ರದರ್ಶನ ನಗರದ ಎಲ್ಲರನ್ನೂ ಆಕರ್ಷಿಸಿತು

*



ದತ್ತಾತ್ರೇಯ ವೀಣಾವಾದನದಲ್ಲಿ ಸ್ವಾಮಿಜೀ ಪಾರ್ವತೀಕರ್.

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. — ಫೆಬ್ರವರಿ 1988**

**ಆನಂದಸಾಗರಸ್ತವ**
– ವಿದ್ವಾನ್ ವಿ ಬಾಲಗಣಪತಿಭಟ್ಟ

**ಆತ್ಮಜ್ಞಾನಿ ಅಲ್ಲಮ**
– ಚಿ. ನ. ಕೃಷ್ಣಮೂರ್ತಿ

**ಚಿಕದೇವರಾಜ ಬಿನ್ನಪ**
– ಬಿ. ಎಸ್. ರಾಮಾಚಾರ್

**ಕಾಮೋತ್ಸವ**
– ಸುಮಿತ್ರಾ ಶಾನಭಾಗ

**ಮರುಳ ಮುನಿಯನ ಜ್ಞಾನಾಮೃತ**
– ಭಾರ್ಗವಿಶ್ರೀ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು
ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ 1988

| | | |
|---|---|---|
| 2. | ಮಂಗಳವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ. |
| 4. | ಗುರುವಾರ | ತಿರುಮಳಿಶೈಯಾಳ್ವಾರ್ ವರ್ಷ ತಿರುನಕ್ಷತ್ರ. |
| 7 | ಭಾನುವಾರ | 'ಕೂರತ್ತಾಳ್ವಾರ್' ವರ್ಷ ತಿರುನಕ್ಷತ್ರ, ಶ್ರೀನಿವಾಸಮಂಗಾಪುರಂ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣ |
| 8. | ಸೋಮವಾರ | ,, ,, ,, ಧ್ವಜಾರೋಹಣ |
| 12. | ಶುಕ್ರವಾರ | ,, ,, ,, ಗರುಡವಾಹನ |
| 15. | ಸೋಮವಾರ | ,, ,, ,, ರಥೋತ್ಸವ |
| 16. | ಮಂಗಳವಾರ | ,, ,, ,, ತೀರ್ಥವಾರಿ. ಮಹಾಶಿವರಾತ್ರಿ. |
| 28. | ಭಾನುವಾರ | ಕುಲಶೇಖರಾಳ್ವಾರ್ ವರ್ಷತಿರುನಕ್ಷತ್ರ, ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವಸ್ವಾಮಿ ತೆಪ್ಪೋತ್ಸವಾರಂಭ. |

# ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಫೆಬ್ರವರಿ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾದರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

17, 34, 35, 41, 49, 56, 90, 93, 97, 101, 109, 110, 140, 142, 144, 207, 222, 225, 313, 314, 328, 331, 400, 421, 422, 611, 752, 754, 755, 757, 765, 768, 783, 791, 791, 795, 796, 1303, 1304, 1306 ರಿಂದ 1313, 1315, 1316, 1317, 1318, 1319, 1321 ರಿಂದ 1353.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯ ಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

## ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ಸಂಪುಟ ಒಂದು ಹಾಗೂ ಎರಡು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

